# ದೇವಲಕುಂದ ವಾದಿರಾಜ

# DEVALAKUNDA VADIRAJA



ಕರ್ನಾಟಕ ಲಲಿತಕಲಾ ಅಕಾಡೆಮಿ

Karnataka Lalithakala Academy



## ಹೆಚ್. ಎಸ್. ಸುರೇಶ್

ಹೆಚ್.ಎನ್. ಸುರೇಶ್ ಅವರು ವಾಣಿಜ್ಯ ಪದವೀಧರರಾಗಿದ್ದರೂ ವಿವಿಧ ಲಲಿತ ಕಲೆಗಳಲ್ಲಿ ಆಸಕ್ತಿಯುಳ್ಳವರು. ಬೆಂಗಳೂರಿನ ಕೆನ್ ಕಲಾ ಶಾಲೆಯಲ್ಲಿ ಚಿತ್ರಕಲೆಯ ಪರಿಚಯ ಪಡೆದುಕೊಂಡ ಇವರು ಕೆಲವು ಪ್ರದರ್ಶನಗಳಲ್ಲಿಯೂ ತಮ್ಮ ಚಿತ್ರಗಳನ್ನು ಪ್ರದರ್ಶಿಸಿದ್ದಾರೆ. ತಮ್ಮ ಚಟುವಟಿಕೆಗಳ ಮೂಲಕ ಬೆಂಗಳೂರಿನ ಸಾಂಸ್ಕೃತಿಕ ಲೋಕದಲ್ಲಿ ಪರಿಚಿತರಾದ ಇವರು ಕನ್ನಡ ಪ್ರಭ ಪತ್ರಿಕೆಯ ಕಲಾವಿಮರ್ಶಕರಾಗಿಯೂ ಕೆಲಸ ಮಾಡಿದ್ದಾರೆ. ಕರ್ನಾಟಕ ಲಲಿತಕಲಾ ಅಕಾಡೆಮಿ ಹಾಗೂ ಕರ್ನಾಟಕ ಸಂಗೀತ, ನೃತ್ಯ ಅಕಾಡೆಮಿ ಸದಸ್ಯರಾಗಿಯೂ ಸೇವೆ ಸಲ್ಲಿಸಿದ ಶ್ರೀಯುತರು ಪ್ರಸ್ತುತ ಬೆಂಗಳೂರಿನ ಭಾರತೀಯ ವಿದ್ಯಾಭವನದ ಕಾರ್ಯಕ್ರಮ ನಿರ್ದೇಶಕರಾಗಿದ್ದಾರೆ. ದಿ. ವಾದಿರಾಜರ ನಿಕಟವರ್ತಿಯಾಗಿದ್ದ ಸುರೇಶ್ ಅವರು ವಾದಿರಜ್ ಅವರ ಕಲೆ ಮತ್ತು ವ್ಯಕ್ತಿತ್ವದ ಬಗ್ಗೆ ಇಲ್ಲಿ ಬರೆದಿದ್ದಾರೆ.

# ದೇವಲಕುಂದ ವಾದಿರಾಜ

# DEVALAKUNDA VADIRAJA

ಹೆಚ್.ಎನ್. ಸುರೇಶ್

**H.N. SURESH**



ಕರ್ನಾಟಕ ಲಲಿತಕಲಾ ಅಕಾಡೆಮಿ

ನೃಪತುಂಗ ರಸ್ತೆ, ಬೆಂಗಳೂರು - ೫೬೦ ೦೦೨.

**Karnataka Lalithakala Academy**

Nrupatunga Road, Bangalore 560 002.

**Devalakunda Vadiraja:**
A Monograph on the life & works of D. Vadiraja.
Author : H.N. Suresh. Published by K. Mukundan,
Registrar, Karnataka Lalithakala Academy, Nrupatunga Road,
Bangalore 560 002.

First Edition: 1997
1000 Copies.

**Price : Rs. 10.00**



**Printed at Rashmi Mudrana, 5th Cross, Sudhamanagar, Bangalore 27. Ph: 2243550**

# ಒಂದು ಮಾತು

ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಮುಖ ಯೋಜನೆಗಳಲ್ಲಿ ರಾಜ್ಯದ ಹಿರಿಯ ಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸುವುದೂ ಒಂದು. ಈ ಪುಸ್ತಕಗಳು ಆ ಹೆಸರಾಂತ ಕಲಾವಿದರ, ಅವರ ಕಲೆಯ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಕಲೆಯು ಬೆಳೆದು ಬಂದ ದಾರಿ ಮತ್ತು ಅವರ ಜೀವನ ಚರಿತ್ರೆಯ ಬಗ್ಗೆ ತಿಳುವಳಿಕೆ ಉಂಟು ಮಾಡಲು ಸಹಾಯಕವಾಗಬಲ್ಲದು.

ಈ ಯೋಜನೆಯಲ್ಲಿ ಈಗಾಗಲೇ ಸುಮಾರು 40 ಪುಸ್ತಕಗಳು ಪ್ರಕಟಗೊಂಡಿದ್ದು ಇನ್ನೂ ಹಲವು ಪುಸ್ತಕಗಳು ಹೊರಬರಲಿವೆ. ಈ ಮಾಲಿಕೆಯು ಅತ್ಯಂತ ಜನಪ್ರಿಯವಾಗಿದ್ದು ಅನೇಕ ಪುಸ್ತಕಗಳು ಪುನರ್ ಮುದ್ರಣವಾಗಿರುವುದು, ಅವುಗಳ ಅವಶ್ಯಕತೆ, ಸಾರ್ಥಕತೆಗಳ ದ್ಯೋತಕ.

ಈ ಪುಸ್ತಕಗಳನ್ನು ರಚಿಸಲು ಆರಿಸಿರುವ ಬರಹಗಾರರು ಕಲೆಯ ವಿಷಯ ಮತ್ತು ಆಯಾ ಕಲಾವಿದರ ಜೀವನ, ಕೃತಿಯ ಬಗ್ಗೆ ಹೆಚ್ಚು ಅರಿತಿರುವವರು. ಪ್ರಸ್ತುತ, ಈ ಪುಸ್ತಕ ನಾಡಿನ ಹಿರಿಯ ಕಲಾವಿದರಾದ ದಿವಂಗತ ಡಿ. ವಾದಿರಾಜರವರ ಬಗ್ಗೆಯಾಗಿದ್ದು ಅವರು ಶಿಲ್ಪಕಲಾ ಪ್ರಪಂಚದಲ್ಲಿ ಮಾಡಿರುವ ಸಾಧನೆ ಅಪಾರ. ಈ ಕೃತಿಯುನ್ನು ರಚಿಸಿರುವ ಶ್ರೀ ಹೆಚ್.ಎನ್. ಸುರೇಶ್ ಅವರು, ಕಲಾ ಬರಹಗಾರರಾಗಿದ್ದು ತಮ್ಮ ಕೆಲಸವನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಅವರಿಗೂ ಹಾಗೂ ಈ ಪುಸ್ತಕದ ಸಂಪಾದಕರಾದ ಶ್ರೀ ಚಿ.ಸು. ಕೃಷ್ಣ ಸೆಟ್ಟಿ ಅವರಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಎಂದಿನಂತೆ ಕಲಾರಸಿಕರು, ಸಾಹಿತ್ಯಾಭಿಮಾನಿಗಳು ಈ ಕೃತಿಯನ್ನು ಸ್ವಾಗತಿಸುತ್ತಾರೆಂದು ಆಶಿಸುತ್ತೇನೆ.

ಸಿ. ಚಂದ್ರಶೇಖರ

*ಅಧ್ಯಕ್ಷರು ಹಾಗೂ ಗೌರವ ಸಂಪಾದಕರು*

*ಕರ್ನಾಟಕ ಲಲಿತಕಲಾ ಅಕಾಡೆಮಿ*

"ಕಲಾವಿದ ಸ್ವತಂತ್ರನಾಗಿರಬೇಕು. ಸ್ವಾಭಿಮಾನಿಯೂ ಆಗಿರಬೇಕು. ತಾನು ಮಾಡುವ ಕೆಲಸದಲ್ಲಿ ಆತ್ಮವಿಶ್ವಾಸ ಹೊಂದಿರಬೇಕು. ಕಲೆಗೆ ಎಂದಿಗೂ ಆವನಿಂದ ಅಪಚಾರವಾಗಬಾರದು. ಯಾರಿಗೂ ದಾಕ್ಷಿಣ್ಯಕ್ಕಾಗಿ ತಲೆಬಗ್ಗಿಸಬೇಕಾದ ಪರಿಸ್ಥಿತಿ ಕಲಾವಿದನಿಗೆ ಬರಬಾರದು." ಹೀಗೆ ಇಂತಹ ಇನ್ನೂ ಹತ್ತು-ಹಲವು ದಿಟ್ಟ ನಿಲುವುಗಳಲ್ಲಿ ಅಪಾರ ನಂಬಿಕೆಯಿಟ್ಟು, ಅದರಂತೆಯೇ ತಮ್ಮ ಇಡೀ ಜೀವನವನ್ನು ಕಲಾರಂಗದಲ್ಲಿ ಅರ್ಪಿಸಿದ ಹಿರಿಯ ಚೇತನ-ದೇವಲಕುಂದ ವಾದಿರಾಜ.

[illegible]ೆಯ ವಿಚಾರಗಳಲ್ಲಿ ಎಂದಿಗೂ ರಾಜಿಮಾಡಿಕೊಳ್ಳುವ ಪ್ರವೃತ್ತಿ [illegible]ಗಿರಲಿಲ್ಲ. ಹಾಗೆಯೇ, ಕಲಾ ಬೆಳವಣಿಗೆಗಳಿಗೆ ಮಾರ್ಗದರ್ಶನದ [illegible]ತೆಯನ್ನು ಸಾಧ್ಯವಾದಷ್ಟು ನೀಗಿಸುವ ದಿಸೆಯಲ್ಲಿ ಅವರ ಅವಿರತ ಪ್ರಯತ್ನಗಳು ಸಾಕಷ್ಟು ಫಲವನ್ನು ಕೊಟ್ಟಿದೆ. ಇಂತಹ ಕಾರಣಗಳಿಂದಾಗಿಯೇ ವಾದಿರಾಜ ಅವರ ಜೀವನ ಹಾಗೂ ಕಲೆ ವಿಶೇಷ ಮಹತ್ವ ಪಡೆದುಕೊಳ್ಳುತ್ತದೆ.

ವಾದಿರಾಜರು ಕಲಾರಂಗಕ್ಕೆ ಅಪರಿಚಿತ ವ್ಯಕ್ತಿಯೇನಲ್ಲ. ದೇಶ ವಿದೇಶಗಳಲ್ಲಿಯೂ ಕರ್ನಾಟಕದ ಶಿಲ್ಪಕಲಾ ಸಂಪ್ರದಾಯವನ್ನು ಗಮನಾರ್ಹವಾದ ರೀತಿಯಲ್ಲಿ ಪ್ರಚಾರ ಮಾಡಿದವರು. ತಮ್ಮ ಜೀವನದುದ್ದಕ್ಕೂ, ನಿರಂತರವಾಗಿ ಸವಾಲುಗಳನ್ನೇ ಎದುರಿಸಬೇಕಾದ ಸಂದರ್ಭಗಳೇ ಅವರಿಗೆ ಇರುತ್ತಿದ್ದುದರಿಂದ, ವಾದಿರಾಜರು ಎಂತಹ ಸನ್ನಿವೇಶಗಳಲ್ಲೂ ಧೃತಿಗೆಡುತ್ತಿರಲಿಲ್ಲ. ಇದಕ್ಕೆ ಅವರ ಜೀವನವೇ ಸಾಕ್ಷಿ.

## ಬಾಲ್ಯ

ಕುಂದಾಪುರದ ದೇವಲಕುಂದ ದಕ್ಷಿಣ ಕನ್ನಡ ಜಿಲ್ಲೆಯ ಸಣ್ಣ ಗ್ರಾಮ. ಅಲ್ಲೊಂದು ವಿಷ್ಣುದೇವಾಲಯ. ಅಲ್ಲಿನ ಅರ್ಚಕರ ಹೆಸರು ಸುಬ್ಬರಾಯಭಟ್ಟರು. ಉದ್ದಾಮ ಸಂಸ್ಕೃತ ಪಂಡಿತರೆಂದು ಇವರು ಖ್ಯಾತರಾಗಿದ್ದರು. ಸ್ಥಿತಿವಂತರ ಮನೆತನದಲ್ಲಿ ಸುಬ್ಬರಾಯರು ಹುಟ್ಟಿ ಬೆಳೆದರೂ, ತಮ್ಮ ಹಠದ ಸ್ವಭಾವದಿಂದ ಹಾಗೂ ದುಂದುಗಾರಿಕೆಯ ಪ್ರವೃತ್ತಿಯಿಂದ ಪೂರ್ವಾರ್ಜಿತ ಆಸ್ತಿಪಾಸ್ತಿಗಳನ್ನೆಲ್ಲಾ ಕಳೆದಿದ್ದರು. ಭಟ್ಟರ ಸಾಧು ಸ್ವಭಾವದ ಹೆಂಡತಿಯೇ ಲಕ್ಷ್ಮಮ್ಮ. ಈ ದಂಪತಿಗಳ ಏಕೈಕ ಪುತ್ರನೇ ಕರ್ನಾಟಕದ ಪ್ರಖ್ಯಾತ ಶಿಲ್ಪಿ ಎಂದು ಹೆಸರಾದ ವಾದಿರಾಜ.

ಇವರು ಹುಟ್ಟುವ ಹೊತ್ತಿಗೆ ಮನೆ-ಮಠ, ಆಸ್ತಿ-ಪಾಸ್ತಿ ಏನೂ ಉಳಿಯದೆ ಮುಂದಿನ ಜೀವನಕ್ಕಾಗಿ ದೇವಲಕುಂದವನ್ನೇ ಬಿಡಬೇಕಾದ ಪರಿಸ್ಥಿತಿ ಈ ದಂಪತಿಗಳಿಗಿತ್ತು. ಕೌಟುಂಬಿಕ ಸಮಸ್ಯೆಗಳು ಹೆಚ್ಚಾಗಿ, ಹಸುಕಂದನಾದ ವಾದಿರಾಜನನ್ನು ತಾಯಿಯೊಡನೆಯೂ ಸಹ ಬೆಳೆಯಲು ಬಿಡದೆ, ಲಕ್ಷ್ಮಮ್ಮನವರನ್ನು ಅವರ ತವರೂರಾದ ಉಡುಪಿಗೆ, ಭಟ್ಟರು ಕಳುಹಿಸಿದರು. ನೆರೆಹೊರೆಯವರ ಪಾಲನೆ, ಪೋಷಣೆಯಲ್ಲಿಯೇ ವಾದಿರಾಜರು ಬೆಳೆಯತೊಡಗಿದರು. ತಮ್ಮ ಶಿಷ್ಯರೊಂದಿಗೆ ಸಂಸ್ಕೃತ ವೇದಪಾಠಗಳನ್ನು ಭಟ್ಟರು ಹೇಳುತ್ತಿದ್ದಾಗ, ಬಾಲಕ ವಾದಿರಾಜನ ಕಿವಿಗೂ ಬಿದ್ದು ಸ್ವಲ್ಪಮಟ್ಟಿಗೆ ಸಂಸ್ಕೃತದ ಪರಿಚಯವಾಯಿತು. ಪುರಾಣ, ಪುಣ್ಯಕಥೆಗಳು ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯಿತು. ಯಾವ ದೇವಸ್ಥಾನಕ್ಕೆ ಹೋದರೂ, ತಾವು ಕೇಳಿದ ಕಥೆಗಳ ಮೂರ್ತಿಗಳನ್ನು ಕಂಡಾಗ ಮನಸ್ಸಿಗೆ ಯಾವುದೋ ಲೋಕದಲ್ಲಿದ್ದಂತೆ ಭಾವನೆ.

ತಂದೆ ತೀರಿಕೊಂಡಾಗ ವಾದಿರಾಜರಿಗೆ ಒಂಭತ್ತು ವರ್ಷ. ನೆರೆಹೊರೆಯವರೇ ಭಟ್ಟರ ಅಂತ್ಯಕ್ರಿಯೆಯನ್ನು ಮುಗಿಸಿ ವಾದಿರಾಜರನ್ನು ಉಡುಪಿಯಲ್ಲಿದ್ದ ತಾಯಿಯ ಬಳಿಗೆ ಬಿಟ್ಟರು. ಕೊನೆಗೂ ತನ್ನ ಕಡೆಗೆ ಬಂದ ಮಗನೊಡನೆ ಮೈಸೂರು ಸೇರುವ ನಿರ್ಧಾರ ಮಾಡಿದರು ತಾಯಿ ಲಕ್ಷ್ಮಮ್ಮ. ಅಪರಿಚಿತ ಮೈಸೂರಿಗೆ ಬಂದಿಳಿದ ತಾಯಿ ಮಗನಿಗೆ "ಮುಂದೇನು?" ಎಂದು ತಿಳಿಯದೆ, ಕೊತ್ವಾಲ ರಾಮಯ್ಯನವರ ಬೀದಿಯಲ್ಲಿ ನಡೆದು ಬರುತ್ತಿದ್ದಾಗ ಹೊಟ್ಟೆ ಹಸಿದಿತ್ತು. ಮುಖ ಬಾಡಿತ್ತು. ಇವರ

ಪರಿಸ್ಥಿತಿಯನ್ನು ಗ್ರಹಿಸಿದವರೊಬ್ಬರು, ತಮ್ಮಲ್ಲಿಯೇ ತಾತ್ಕಾಲಿಕವಾಗಿ ಉಳಿದುಕೊಳ್ಳಲು ವ್ಯವಸ್ಥೆ ಮಾಡಿದರು. ಹಸಿದಿದ್ದ ತಾಯಿ, ಮಗನಿಗೆ ಊಟ ಕೊಟ್ಟು ಸಂತೈಸಿದರು. ಈ ರೀತಿ ಉದಾರವಾಗಿ ನಡೆದುಕೊಂಡ ವ್ಯಕ್ತಿಯೇ, ವಿದ್ವಾನ್ ಮೈಸೂರು ಟಿ. ಚೌಡಯ್ಯವನರು.

ಕಾಲಕ್ರಮೇಣ ಮೈಸೂರಿನಲ್ಲಿ ಅವರಿವರ ಮನೆಕೆಲಸ ಮಾಡಿಕೊಂಡು ಲಕ್ಷ್ಮಮ್ಮನವರು ಮಗನ ಭವಿಷ್ಯದಲ್ಲಿ ಬಹಳ ಆಸೆ ಇಟ್ಟುಕೊಂಡು, ಶಾಲೆಗೆ ಸೇರಿಸಿದರು. ಬಾಲ್ಯದಿಂದಲೂ ಚಿತ್ರಕಲೆಗೆ ಮನಸೋತಿದ್ದ ವಾದಿರಾಜರಿಗೆ ಶಾಲೆಯ ಪಾಠಗಳು ಹಿಡಿಸಲಿಲ್ಲ. ಹಿಂದಿನ ಬೆಂಚಿನಲ್ಲಿ ಕುಳಿತು ಮಹಾರಾಜರ ಚಿತ್ರ, ಗಣೇಶ, ಸರಸ್ವತಿ, ಲಕ್ಷ್ಮಿ ಹೀಗೆ ಮನಬಂದಂತೆ ಹಲವಾರು ಚಿತ್ರಗಳನ್ನು ರಚಿಸುತ್ತಾ ಶಾಲೆಯ ಚಿಕ್ಕಹುಡುಗರಿಂದ ಹೊಗಳಿಸಿಕೊಳ್ಳುವುದರಲ್ಲಿಯೇ ಸಂತೋಷಪಡುತ್ತಿದ್ದರು.

ಈ ಬಾಲಕನ ಚಿತ್ರ ರಚಿಸುವ ಪ್ರತಿಭೆಗೆ ಶಾಲಾ ಮಾಸ್ತರರು ಮನಸೋತರೂ ಇವನಿಂದ ಮಿಕ್ಕವರು ಹಾಳಾಗುತ್ತಾರೆಂದು ತಾಯಿ ಲಕ್ಷ್ಮಮ್ಮನವರನ್ನು ಕರೆದು ವಾದಿರಾಜರನ್ನು ಚಾಮರಾಜೇಂದ್ರ ಕಲಾಶಾಲೆಗೆ ಸೇರಿಸಲು ಸಲಹೆ ನೀಡಿದರು. ಓದಲು ಬೇಕಾದ ಪುಸ್ತಕಗಳನ್ನು ಕೊಳ್ಳಲು ಹಣವಿಲ್ಲದಿದ್ದಾಗ ಈ ಸಲಹೆ ತಾಯಿ ಮಗನಿಗೆ ತುಂಬಾ ಹಿಡಿಸಿತು. ಕೂಡಲೇ ಚಿತ್ರಕಲಾಶಾಲೆಗೆ ಪ್ರವೇಶ ಕೋರಿದರು. ರೇಖಾಚಿತ್ರ ಬರೆಯುವುದರಲ್ಲಿ, ಬಣ್ಣ ಹಾಕುವುದರಲ್ಲಿ ವಾದಿರಾಜ ಪ್ರತಿಭಾವಂತರಾದರೂ ಅಲ್ಲಿ ಚಿತ್ರಕಲಾ ವಿಭಾಗಕ್ಕೆ ಪ್ರವೇಶ ದೊರೆಯಲಿಲ್ಲ. ಆದರೆ ಗಂಧದ ಕೆತ್ತನೆ ವಿಭಾಗಕ್ಕೆ ಸೇರಲು ಅವಕಾಶ ಮಾಡಿದರು. ಇಲ್ಲೂ ವಾದಿರಾಜರಿಗೆ ನಿರಾಸೆ ಆದರೂ ಚಿತ್ರ ಬರೆಯಬಹುದಲ್ಲಾ ಎಂದು ಸಮಾಧಾನ ಪಟ್ಟುಕೊಂಡೇ ಅಲ್ಲಿ ಕಲಿಯಲು ಪ್ರಾರಂಭಿಸಿದರು.

## ಯೌವ್ವನ

ಆಗಿನ ಕಾಲಕ್ಕೆ ಗಂಧದ ಕೆತ್ತನೆಯಲ್ಲಿ ಹೆಸರು ಮಾಡಿದ್ದವರು ಗುಡಿಕಾರರಾದ ಗಣಪತಪ್ಪ ಮತ್ತು ವೆಂಕಪ್ಪ ಎನ್ನುವರು. ಇವರೇ ವಾದಿರಾಜರ ಮಾರ್ಗದರ್ಶಕರಾದರು. ಕುಶಲಶಿಲ್ಪಿಗಳಾದ ಇವರಿಬ್ಬರೂ ಕೆತ್ತನೆಯ ವಿದ್ಯೆಯನ್ನು ವಾದಿರಾಜರಿಗೆ ಧಾರೆಯೆರೆದರು. ಹೀಗೆ ಮೈಸೂರಿನಲ್ಲಿ

ಕೆಲವು ಕಾಲ ಕಳೆಯಿತು. ಮನೆಕೆಲಸದ ಸಂಪಾದನೆಯಿಂದ ಊಟಕ್ಕೂ ಸಾಲದಿದ್ದಾಗ ಯಾರೋ ನಂಜನಗೂಡಿಗೆ ಹೋದರೆ ಊಟಕ್ಕೆ ತೊಂದರೆಯಾಗುವುದಿಲ್ಲವೆಂದು ಸೂಚಿಸಿದರು. ಹಾಗಾಗಿ ನಿಗದಿತ ಮೂರು ವರ್ಷದ ಕೆತ್ತನೆ ತರಬೇತಿ ಮುಗಿಯುವುದರೊಳಗೆ ವಾದಿರಾಜರನ್ನು ಕಲಾಶಾಲೆಯಿಂದ ಬಿಡಿಸಿ, ಲಕ್ಷ್ಮಮ್ಮನವರು ವಾದಿರಾಜರೊಂದಿಗೆ ನಂಜನಗೂಡಿಗೆ ಬಂದರು. ಮತ್ತೆ ಓದುವ ಶಾಲೆಗೆ ವಾದಿರಾಜರನ್ನು ಕಳುಹಿಸಲಾಯಿತು. ಎಂದಿನಂತೆ ಶಾಲೆಗಿಂತ ದೇವಾಲಯವೇ ಮುಖ್ಯ ಆಕರ್ಷಣೆಯಾಯಿತು. ನಂಜನಗೂಡಿನ ದೇವಾಲಯದ ಶಿಲ್ಪಗಳನ್ನು ಅಧ್ಯಯನ ಮಾಡುತ್ತ ಅವುಗಳನ್ನು ರೇಖಾ ಚಿತ್ರಗಳಲ್ಲಿ ಹೊರತರುತ್ತ ವಾದಿರಾಜರು ಕಾಲ ಕಳೆಯುತ್ತಿದ್ದರು. ಆಗ ಅವರಿಗೆ 13 ವರ್ಷ. ಇದೇ ಸಮಯದಲ್ಲಿ ಲಕ್ಷ್ಮಮ್ಮನವರು ತೀವ್ರ ಅನಾರೋಗ್ಯಕ್ಕೆ ಗುರಿಯಾದರು. ಚಿಕಿತ್ಸೆಗಾಗಿ ಮತ್ತೆ ತಾಯಿ ಮಗ ಮೈಸೂರಿಗೆ ಬರುವಂತಾಯಿತು. ಹೋಟೆಲೊಂದರಲ್ಲಿ ಕೆಲಸಕ್ಕೆ ಸೇರಿದ ವಾದಿರಾಜರು ಬಂದ ಸಂಪಾದನೆಯಿಂದ ತಾಯಿಯನ್ನು ಆಸ್ಪತ್ರೆಗೆ ಸೇರಿಸಿ ಅವರ ಆರೈಕೆ ಮಾಡತೊಡಗಿದರು. ಆದರೆ ಅದು ಉಪಯೋಗಕ್ಕೆ ಬರಲಿಲ್ಲ. ಒಂದು ರಾತ್ರಿ ಲಕ್ಷ್ಮಮ್ಮನವರು ಆಸ್ಪತ್ರೆಯಲ್ಲಿಯೇ ಕೊನೆಯುಸಿರೆಳೆದರು. ಮತ್ತೆ ಅವರಿವರ ನೆರವಿನಿಂದಲೇ ತಾಯಿಯವರ ಅಂತ್ಯಸಂಸ್ಕಾರ ಮಾಡಿದರು.

ಮಾನಸಿಕ ಹಾಗೂ ದೈಹಿಕ ಬಳಲಿಕೆಯಿಂದ ವಾದಿರಾಜರು ಈ ಸಂದರ್ಭದಲ್ಲಿಯೇ ವಿಷಮಶೀತ ಜ್ವರಕ್ಕೆ ಬಲಿಯಾದರು. ಮೈಸೂರಿನ ಆಯುರ್ವೇದ ಆಸ್ಪತ್ರೆ ಸೇರಬೇಕಾಯಿತು. ಸಾವು ಬದುಕಿನೊಡನೆ ಅವರ ಸೆಣಸಾಟ ಅಲ್ಲಿ ನಡೆದಿತ್ತು. ಪವಾಡದ ರೀತಿಯಲ್ಲಿ ವಾದಿರಾಜರು ಚೇತರಿಸಿಕೊಂಡರು. ಆಸ್ಪತ್ರೆಯಲ್ಲಿದ್ದ ಆರು ತಿಂಗಳ ಕಾಲ ಅಲ್ಲಿದ್ದ ಬಹುತೇಕ ಸಾಬೂನುಗಳೆಲ್ಲವೂ ಸಣ್ಣ ಸಣ್ಣ ವಿಗ್ರಹಗಳಾಗಿ ಮಾರ್ಪಾಡಾದವು. ಆಸ್ಪತ್ರೆಯಿಂದ ಹೊರಬಂದ ನಂತರ ಮತ್ತೆ ಪ್ರಾರಂಭವಾಯಿತು ಜೀವನದೊಂದಿಗೆ ಹೋರಾಟ. ಹೋಟೆಲಿನ ಕೆಲಸವೇ ಮಾರ್ಗವಾಯಿತು. ಮೈಸೂರಿನ ನಾರ್ಣಾಚಾರ್ಯರ ಹೋಟೆಲು ಅಂದಿನ ಕಾಲಕ್ಕೆ ತಿಂಡಿ ತಿನಿಸುಗಳಿಗೆ ಬಹಳ ಪ್ರಸಿದ್ಧಿ. ಕಲಾವಿದರು, ಗಣ್ಯರೂ ಈ ಹೋಟೆಲಿಗೆ ಹೆಚ್ಚಾಗಿ ಬರುತ್ತಿದ್ದರು. ಮೈಸೂರು ವಾಸುದೇವಾಚಾರ್ಯರು, ನಾಟಕ ಶಿರೋಮಣಿ ಪೀರ್ ಸಾಹೇಬರು ಹೀಗೆ ಇನ್ನೂ ಹಲವಾರು

ಗಣ್ಯಕಲಾವಿದರನ್ನು ಈ ಸಂದರ್ಭದಲ್ಲಿ ವಾದಿರಾಜರು ಹತ್ತಿರದಿಂದ ನೋಡಿ ಸಂತೋಷಪಟ್ಟಿದ್ದೂ ಉಂಟು. ಹೀಗೆ ನಾಲ್ಕಾರು ವರ್ಷ ಕಳೆಯಿತು.

ವಾದಿರಾಜರಲ್ಲಿದ್ದ ಕಲಾವಿದ 'ಇನ್ನು ಇದೇ ರೀತಿಯಲ್ಲಿ ಬದುಕಲು ಸಾಧ್ಯವಿಲ್ಲ' ಎಂದು ಭಾವಿಸಿ ಒಂದು ದಿನ ಯಾರಿಗೂ ಹೇಳದೆ ಕೇಳದೆ ಮೈಸೂರಿನ ಹೋಟೆಲ್ ಬಿಟ್ಟು ಶಿವಮೊಗ್ಗಕ್ಕೆ ಬಂದರು. ಅಲ್ಲಿನ ಅಡಿಕೆ ತೋಟದಲ್ಲಿ ಕೆಲಸ ಮಾಡತೊಡಗಿದರು. ಮತ್ತೆ ಬಿಡುವಿಲ್ಲದ ಕೆಲಸ. ಭವಿಷ್ಯವಿಲ್ಲದ ಜೀವನ ಮುಂದುವರೆದಿತ್ತು. ತೋಟದ ಕೆಲಸ ನೋಡಿಕೊಳ್ಳುವ ಜವಾಬ್ದಾರಿ ಹೊಂದಿದ್ದ ವಾದಿರಾಜರಿಗೆ ಇದೇ ಸಂದರ್ಭದಲ್ಲಿ ಮದುವೆಯಾಯಿತು. ಹೆಂಡತಿ ನಾಗಮ್ಮ, ತಂದೆತಾಯಿಯನ್ನು ಚಿಕ್ಕ ವಯಸ್ಸಿನಲ್ಲೇ ಕಳೆದುಕೊಂಡು ಸೋದರ ಮಾವನ ಮನೆಯಲ್ಲಿ ಇದ್ದಂತಹವರು.

ವಿಸ್ತಾರವಾದ ಅಡಿಕೆ ತೋಟದಲ್ಲಿ ಸೂರ್ಯನನ್ನು ನೋಡುವುದೇ ಕಷ್ಟವಾದ್ದರಿಂದ ಹಾಗೂ ಯಾಂತ್ರಿಕ ಕೆಲಸಕಾರ್ಯಗಳಿಂದ ಬೇಸರಗೊಂಡ ವಾದಿರಾಜರು ಶಿವಮೊಗ್ಗವನ್ನು ಬಿಟ್ಟು ಹತ್ತಾರು ವರ್ಷ ಗದಗ, ಹುಬ್ಬಳ್ಳಿ ಹೀಗೆ ಹಲವು ಸ್ಥಳಗಳಲ್ಲಿ ಮತ್ತೆ ಅಲೆದಾಟದ ಜೀವನ ನಡೆಸಬೇಕಾಯಿತು. ಎಲ್ಲಿಯೂ ನೆಮ್ಮದಿ ಇಲ್ಲದೆ ಮತ್ತೆ ಮೈಸೂರಿಗೆ ಬಂದು ಅಲ್ಲಿ ಗಂಧದ ವಿಗ್ರಹಗಳನ್ನು ಮಾರಾಟ ಮಾಡುವ ಅಂಗಡಿಯೊಂದರಲ್ಲಿ ಕೆಲಸಕ್ಕೆ ಸೇರಿದರು. ಈ ಸಂದರ್ಭದಲ್ಲಿಯೇ ಡಾ॥ ಸಂಪತ್ ಅಯ್ಯಂಗಾರ್‌ರವರ ಪರಿಚಯ ವಾದಿರಾಜರಿಗೆ ಆಯಿತು. ಸಂಪತ್ ಅಯ್ಯಂಗಾರ್ ಅವರಿಗೆ ಬೆಂಗಳೂರಿನ ಆಯುರ್ವೇದಿಕ್ ಕಾಲೇಜ್‌ನಲ್ಲಿ ಕೆಲಸ ಸಿಕ್ಕಿದ ಕಾರಣ ಅವರೊಂದಿಗೆ ಬೆಂಗಳೂರಿಗೆ ಬಂದು ಸೇರುವ ನಿರ್ಧಾರವನ್ನು ವಾದಿರಾಜರು ಮಾಡಿದರು.

ಬೆಂಗಳೂರಿಗೆ ಬಂದ ಬಹಳ ಕಾಲದವರೆಗೆ ಬೆಳಗಿನ ಹೊತ್ತು ಡಾಕ್ಟರರ ಮನೆಕೆಲಸ, ಸಂಜೆ ಊರು ಸುತ್ತುವುದು; ಹೀಗಿತ್ತು ವಾದಿರಾಜರ ಪರಿಪಾಠ. ಒಂದು ದಿನ ನಗರ್ತರಪೇಟೆಯ ಬಳಿ ನಾಲ್ಕಾರು ಜನ ಕುಳಿತು ಗಂಧದ ಕೆತ್ತನೆಯಲ್ಲಿ ತೊಡಗಿದ್ದರು. ದಾರಿಯಲ್ಲಿಯೇ ನಿಂತ ವಾದಿರಾಜರು ಕೆತ್ತನೆ ನೋಡುತ್ತಾ ಆಕರ್ಷಿತರಾದರು. ಕೆತ್ತನೆಗುಂಪಿನ ಯಜಮಾನರಾದ ಶಂಕರಪ್ಪ, ವಾದಿರಾಜರನ್ನೂ ಕರೆದು, ''ಏನು ನೋಡುತ್ತಿದ್ದೀಯಾ?'' ಎಂದಾಗ ''ಮೈಸೂರಿನಲ್ಲಿ ನಾನು ಕೆತ್ತನೆ ಕೆಲಸ ಮಾಡುತ್ತಿದ್ದೆ'' ಎಂದು ವಾದಿರಾಜರು ಸ್ವಯಂ ಪರಿಚಯ ಮಾಡಿಕೊಂಡರು.

ಇದನ್ನು ಕೇಳಿದ ಶಂಕರಪ್ಪ ಕೆಲವು ಮರದ ತುಂಡುಗಳನ್ನು ವಾದಿರಾಜರಿಗೆ ಕೊಟ್ಟು ಏನಾದರೂ ಕೆತ್ತನೆ ಮಾಡಿತೋರಿಸು ಎಂದಾಗ ಒಂದೆರೆಡು ಗಂಟೆಗಳಲ್ಲಿಯೇ ಸುಂದರ ಹಂಸದ ಕೆತ್ತನೆ ಸಿದ್ಧವಾಯಿತು. ವಾದಿರಾಜರ ಕಲಾಚಾತುರ್ಯವನ್ನು ಈ ಹಂಸದಲ್ಲಿ ಕಂಡ ಶಂಕರಪ್ಪನವರು ನಿಮಗಿಷ್ಟವಿದ್ದರೆ ನಮ್ಮಲ್ಲಿ ಕೆಲಸ ಮಾಡಬಹುದೆಂದರು. ಅಂದು ಸ್ವರ್ಗ ಕೈಗೆ ಸಿಕ್ಕಿದಷ್ಟು ಸಂತೋಷ ವಾದಿರಾಜರವರಿಗೆ. ಡಾಕ್ಟರವರ ಅನುಮತಿ ಪಡೆದು ಮಲ್ಲೇಶ್ವರದಲ್ಲಿ ಒಂದು ಕೊಠಡಿಯನ್ನು ಬಾಡಿಗೆಗೆ ಪಡೆದು ಶಂಕರಪ್ಪನವರ ಬಳಿ ಕೆತ್ತನೆ ಕೆಲಸದ ಜೊತೆಗೆ ತಮ್ಮ ಕೊಠಡಿಯಲ್ಲಿಯೂ ಸಣ್ಣ ಕೆತ್ತನೆ ಕೆಲಸ ಆರಂಭಿಸಿದರು. ಈ ಸಂದರ್ಭದಲ್ಲಿಯೇ ಬಾಲ್ಯಸ್ನೇಹಿತ ನಾರಾಯಣ ಮೂರ್ತಿ, ನಾಟ್ಯಾಚಾರ್ಯ ಉದಯರುದ್ರ, ಗಾನಸುಧಾಕರ ಎ. ಸುಬ್ಬರಾವ್ ಅವರುಗಳ ಪ್ರೋತ್ಸಾಹವೂ ವಾದಿರಾಜರಿಗೆ ದೊರಕಿ, ಕಾಲಕ್ರಮೇಣ ಸ್ವತಂತ್ರ ಜೀವನ ನಡೆಸಬಹುದೆಂಬ ಆತ್ಮವಿಶ್ವಾಸ ಬಂದು, ಶಂಕರಪ್ಪನವರ ಹತ್ತಿರದ ಕೆಲಸ ಬಿಟ್ಟರು. ಗಾಂಧಿ, ನೆಹರೂ, ಯಶೋಧರ ಹೀಗೆ ಇನ್ನೂ ಹತ್ತು ಹಲವಾರು ರೀತಿಯ ಶಿಲ್ಪಗಳನ್ನು ಕೇವಲ ಬ್ಲೇಡು, ಚಾಕು ಮುಂತಾದುವುಗಳನ್ನು ಉಪಯೋಗಿಸಿ ಪ್ಲಾಸ್ಟರ್ ಆಫ್ ಪ್ಯಾರಿಸ್ ಮಾಧ್ಯಮದಲ್ಲಿ ತಯಾರಿಸುತ್ತಿದ್ದರು. ವಾಣಿಜ್ಯ ದೃಷ್ಟಿಯಿಂದ ಈ ಶಿಲ್ಪಕಲೆಗೆ ವಿವಿಧ ಬಣ್ಣಗಳನ್ನು ಬಳಸುವ ಪರಿಪಾಠ ಬೆಳೆಸಿಕೊಂಡರು. ತಮ್ಮ ಶಿಲ್ಪಗಳಿಗೆ ಪ್ಲಾಸ್ಟರ್ ಆಫ್ ಪ್ಯಾರಿಸ್ ತರಲು ಪೋರ್ಸಲಿನ್ ಕಾರ್ಖಾನೆಗೆ ಎಂದಿನಂತೆ ಹೋಗಿದ್ದಾಗ ಅಲ್ಲಿನ ಜನರಲ್ ಮ್ಯಾನೇಜರ್ ಆಗಿದ್ದ ಪಿ. ಹರಿಹರನ್ ಅವರ ಪರಿಚಯ ಇವರಿಗಾಯಿತು. ಸರಳ ಸ್ವಭಾವದ ಹರಿಹರನ್ ಅವರ ಬಗ್ಗೆ ವಾದಿರಾಜ ಅವರಿಗೆ ಇನ್ನಿಲ್ಲದ ಗೌರವ. ಸ್ವತಃ ಕಲಾವಿದರಾಗಿದ್ದ ಹರಿಹರನ್, ಶಾಂತಿನಿಕೇತನದ ಗಮನಾರ್ಹ ಕಲಾವಿದರಾಗಿಯೂ ಹೆಸರು ಪಡೆದಿದ್ದರು. ಚಿತ್ರಕಲೆ, ಮಣ್ಣಿನ ಕಲೆ ಮತ್ತು ಇತರ ಕರಕುಶಲಗಳ ಬಗ್ಗೆ ವಿಶೇಷ ಜ್ಞಾನ ಹೊಂದಿದ್ದ ಹರಿಹರನ್ ಅವರು ವಾದಿರಾಜರ ಮಾರ್ಗದರ್ಶಿಯಾಗಿ ನಂತರದ ವರ್ಷಗಳಲ್ಲಿ ಬಂದದ್ದು ಒಂದು ವಿಶೇಷವೇ ಸರಿ. ಅಲ್ಲಿಯವರೆಗೆ ಮೈಸೂರು ಚಾಮರಾಜ ಶಾಲೆಯಲ್ಲಿನ ಕಲಿಕೆಯ ಬಲದಿಂದಲೇ ಬದುಕುತ್ತಿದ್ದ ಅವರಿಗೆ ಹರಿಹರನ್ ತೋರಿಸಿದ ದಾರಿ ಹೊಸದಾಗಿತ್ತು. ಕಲೆಯ ನಿಜವಾದ ಅಧ್ಯಯನ, ಅಭ್ಯಾಸ, ಸಾಧನೆ ಎಲ್ಲವೂ ಪ್ರಾರಂಭವಾದುದು ಈ ಹಂತದಲ್ಲಿಯೇ.

## ಹೊಸ ಅಧ್ಯಾಯ

ಐದಾರು ವರ್ಷಗಳು, ಈ ಹೊಸದಾರಿಯಲ್ಲಿ ಸಾಗಲು ವಾದಿರಾಜರು ಪ್ರಾಮಾಣಿಕ ಪ್ರಯತ್ನವನ್ನು ಮಾಡಿದರು. ಯಶಸ್ಸನ್ನೂ ಸಾಧಿಸಿದರು. ವಿಶ್ವೇಶ್ವರಪುರದಲ್ಲಿ ಒಂದು ಮನೆಯನ್ನು ಬಾಡಿಗೆಗೆ ಪಡೆದುಕೊಂಡು ಜೀವನ ನಡೆಸತೊಡಗಿದರು. ಆ ವೇಳೆಗೆ ಹರಿಹರನ್ ನೇತೃತ್ವದಲ್ಲಿ ಅಖಿಲ ಭಾರತ ಕರಕುಶಲ ಮಂಡಲಿಯವರು ಪ್ರಾದೇಶಿಕ ವಿನ್ಯಾಸ ಕೇಂದ್ರ ಎಂಬ ಶಾಖೆಯನ್ನು ದೇಶದಲ್ಲೆಲ್ಲಾ ಪ್ರಾರಂಭಿಸಿ ಆಯಾಯ ಪ್ರಾಂತ್ಯಗಳಲ್ಲಿ ಬಳಕೆಯಲ್ಲಿರುವ ಕರಕುಶಲಕಲೆಗಳನ್ನು ಪುನರುತ್ಥಾನ ಮಾಡುವ ಕಾರ್ಯಕ್ರಮವನ್ನು ಹಾಕಿಕೊಂಡರು. ಈ ಯೋಜನೆಯ ಅನುಗುಣವಾಗಿ ಬೆಂಗಳೂರಿನಲ್ಲಿ ಪ್ರಾರಂಭವಾದ ಕೇಂದ್ರಕ್ಕೆ ಮರಕೆತ್ತನೆಯ ವಿಭಾಗದ ಮುಖ್ಯಸ್ಥರಾಗಿ ವಾದಿರಾಜ ಅವರನ್ನು ಹರಿಹರನ್ ನೇಮಿಸಿಕೊಂಡರು. ಇಲ್ಲಿಂದ ಮುಂದೆ ವಾದಿರಾಜರ ಜೀವನದಲ್ಲಿ ಮತ್ತೊಂದು ಅಧ್ಯಾಯ. ಸ್ವಂತ ಕೆಲಸದಿಂದ ಗಳಿಸುತ್ತಿದ್ದ ಇವರಿಗೆ ಸರ್ಕಾರದ ಸಂಬಳ ದೊರೆಯಲು ಪ್ರಾರಂಭವಾಯಿತು. ಪ್ರಿಯವಾದ ಕೆಲಸ, ಕೈ ತುಂಬಾ ಸಂಬಳ. ಅಂದರೆ ಆಗಿನ ಕಾಲಕ್ಕೆ ತಿಂಗಳಿಗೆ ರೂ.250/-. ಆ ಪ್ರಾದೇಶಿಕ ಕೇಂದ್ರದಲ್ಲಿ ಹಲೆಯ ಕಲಾಕೃತಿಗಳ ಪ್ರತಿಕೃತಿ ಮಾಡುವುದು. ಕೃತಿರಚನೆಗೆ ಅಗತ್ಯವಾದ ವಸ್ತುಗಳ ಬಗ್ಗೆ ಹೆಚ್ಚು ಅಧ್ಯಯನ ಮಾಡುವುದು, ವಿವಿಧ ಕಲಾಶೈಲಿಗೆ ಸೇರಿದ ಮೂಲಕೃತಿಯ ವಿಶೇಷ ಲಕ್ಷಣಗಳನ್ನು ಗಮನಿಸುವುದು, ಮುಂತಾದ ಜ್ಞಾನಾರ್ಜನೆಯ ಕೆಲಸವು ಇಲ್ಲಿ ಸಾಕಷ್ಟಿತ್ತು. ಎಲ್ಲಾ ಕುಶಲಕಲೆಗಳ ಬಗ್ಗೆಯೂ ತಿಳಿಯಲು ವಾದಿರಾಜರವರಿಗೆ ಇದೊಂದು ಒಳ್ಳೆಯ ಅವಕಾಶವಾಯಿತು. ಸುಮಾರು ಹತ್ತು ವರ್ಷಗಳ ಕಾಲ ಅಲ್ಲಿ ಕೆಲಸ ಮಾಡಿದರು. ಇಷ್ಟು ಹೊತ್ತಿಗೆ ಭಾರತೀಯ ಸಂಪ್ರದಾಯದ ಶಿಲ್ಪದ ಬಗ್ಗೆ ವಿಶೇಷ ಅಧ್ಯಯನವನ್ನು ವಾದಿರಾಜರು ಮಾಡಿದ್ದರು. ವಿನ್ಯಾಸ ಕೇಂದ್ರದಲ್ಲಿ ಗೆಳೆಯರಾಗಿದ್ದವರಲ್ಲಿ ಜನಪ್ರಿಯರಾದ ಎ.ಪಿ. ದುಬೆ, ಅಪ್ಪುಕುಟ್ಟನ್ ಆಚಾರಿ ಮುಂತಾದವರು ಸೇರಿದ್ದರು. ಇಷ್ಟೇ ಅಲ್ಲದೆ, ಹರಿಹರನ್ ಅವರ ಅವಧಿಯ ನಂತರ ಬಂದ ಅಧಿಕಾರಿ ಶ್ರೀ ಅಸಿತ್‌ಕುಮಾರ್ ಹಲ್ದಾರರೂ ವಾದಿರಾಜರಲ್ಲಿ ನಿಕಟ ಸಂಪರ್ಕ ಹೊಂದಿದ್ದರು. ಶ್ರೀ ಹಲ್ದಾರ್ ನಂತರ ಬಂದ ಅಧಿಕಾರಿಗಳ ಕಾಲದಿಂದ ವಾದಿರಾಜರಿಗೆ ಕಾರ್ಯಾಲಯಗಳ ರಾಜಕೀಯ, ಬೇಸರ ಮೂಡಿಸಿತ್ತು. ಕೆಲಸ ಬಿಡುವ ಯೋಚನೆ

ಪ್ರಾರಂಭವಾಯಿತು. ಕಡೆಗೆ ವಿನ್ಯಾಸ ಕೇಂದ್ರದ ಉದ್ಯೋಗಕ್ಕೆ ರಾಜೀನಾಮೆ ಇತ್ತು ಸ್ವತಂತ್ರ ಕೆಲಸ ಪ್ರಾರಂಭಿಸಿದರು.

ಕೆಲಸ ಬಿಟ್ಟೊಡನೆ ಮೊದಲು ಬಂದ, 'ಮಾ ಆನಂದಮಯಿ' ಆಶ್ರಮಕ್ಕೆ ಕುಸುರಿ ಕೆಲಸದ ಗಂಧದ ಮಂಟಪದ ಕೆಲಸ ಇವರಿಗೆ ಹೆಸರು ತಂದಿತು. ಎಂಟು ಅಡಿ ಎತ್ತರದ, ಅಲಂಕಾರಪೂರ್ಣವಾದ ಈ ಮಂಟಪ ಇಂದಿಗೂ ಕಲ್ಕತ್ತಾದ 'ಮಾ ಆನಂದಮಯಿ ಘಾಟ್' ಪೂಜಾಗೃಹದಲ್ಲಿ ರಾರಾಜಿಸುತ್ತಿದೆ. ಇದು ಇವರು ಮೊದಲನೆಯದಾಗಿ ಮಾಡಿದ ದೊಡ್ಡ ಪ್ರಮಾಣದ, ಹೊಯ್ಸಳ ಶೈಲಿಯ ಮೂರ್ತಿ. ಮುಂದೆ ಸರ್ ಎಂ. ವಿಶ್ವೇಶ್ವರಯ್ಯನವರ ಪ್ರತಿಮೆ ಮಾಡಲು ಅವಕಾಶ ಸಿಕ್ಕಿತು. ಸ್ವತಂತ್ರವಾಗಿ ಕೆಲಸ ಮಾಡ ಬಯಸಿದ ಕಲಾವಿದನಿಗೆ ಇಂತಹ ಕೆಲಸಗಳಿಂದಲೇ ತೃಪ್ತಿ.

ವಾದಿರಾಜರು ಯಾವ ಕೃತಿಯನ್ನಾದರೂ ಮಾಡಲು ಒಪ್ಪಿಕೊಳ್ಳುವಾಗ ಒಂದು ಅಂದಾಜುವೆಚ್ಚ ಹೇಳುತ್ತಿದ್ದರು. ಆದರೆ ಮೂರ್ತಿ ಕೆತ್ತುತ್ತಾ ಹೋದಂತೆಲ್ಲ, ಅದಕ್ಕೆ ಹೇಳಿದ ಬೆಲೆಯಾಗಲೀ, ಅದರ ನಿಜವಾದ ಮೌಲ್ಯವಾಗಲೀ, ಯಾವುದರ ಪರಿವೆಯೂ ಇರುತ್ತಿರಲಿಲ್ಲ. ಕೆಲವೊಮ್ಮೆ ಹೇಳಿದ್ದಕ್ಕಿಂತ ಹೆಚ್ಚು ಖರ್ಚಾಗಿದ್ದರೂ ಹೆಚ್ಚಿಗೆ ಏನನ್ನೂ ಅಪೇಕ್ಷಿಸದೆ "ಇಂತಹ ಒಂದು ಕೃತಿಯನ್ನು ಅಭ್ಯಾಸ ಮಾಡಲು ಅವಕಾಶ ಕೊಟ್ಟಿರಲ್ಲ, ಅದಕ್ಕಿಂತ ಇನ್ನೇನುಬೇಕು?" ಎನ್ನುತ್ತಿದ್ದ ಅವರ ಮನೋವೈಶಾಲ್ಯವನ್ನು ಕಂಡಾಗ ಯಾರಿಗಾದರೂ ಆಶ್ಚರ್ಯವಾಗದಿರದು.

"ಯಾಕೋ ಮಾಡಿದ್ದು ಇಲ್ಲಿ ಸರಿಬರಲಿಲ್ಲ. ಮುಂದಿನ ಸಾರಿ ಮಾಡುವಾಗಲಾದರೂ ಸರಿಯಾಗಿ ಗಮನಿಸಬೇಕು, ತಾನಿನ್ನೂ ಅಭ್ಯಾಸ ಮಾಡಿಕೊಳ್ಳಬೇಕು" ಎಂದುಕೊಳ್ಳುತ್ತಿದ್ದುದು ಅವರ ಸ್ವಭಾವ. "ಕೆಲವರು ತಾವು ಸಾಕಷ್ಟು ಕಲಿತ್ತಿದ್ದೇವೆ; ಇನ್ನೇನು ಕಲಿಯಬೇಕಾದುದಿಲ್ಲ ಎನ್ನುತ್ತಾರೆ. ನೀವು ಮಾತ್ರ ಇಷ್ಟು ಚೆನ್ನಾಗಿ ಮಾಡಿದರೂ, ಇನ್ನು ಸಾಧನೆ ಮಾಡಬೇಕು ಎನ್ನುತ್ತಿರಲ್ಲ?" ಎಂದರೆ, "ನೋಡಿ ನಮಗೆ ನಾವು ಮಿತಿ ಹಾಕಿಕೊಂಡರೆ ಅಲ್ಲಿಗೆ ನಮ್ಮ ಬೆಳವಣಿಗೆ ನಿಂತಂತೆಯೆ ಸರಿ. ವ್ಯಕ್ತಿ ಯಾವಾಗಲೂ ಬೆಳೆಯುತ್ತಿರಬೇಕು. ಕಲಿಕೆಗೆ ಕೊನೆಯಿಲ್ಲ. ಕಲಿಯಬೇಕೆನ್ನುವ ಉತ್ಸಾಹ, ಚೈತನ್ಯ, ಮನಸ್ಸಿಗೆ ಮುಪ್ಪು ತರುವುದಿಲ್ಲ" ಎನ್ನುತ್ತಿದ್ದ ಇವರ ಮಾತು ಅನುಭವಪೂರ್ಣವಾದದ್ದು. ಹೊಸ ಹೊಸ ವಿಷಯಗಳನ್ನು ಸಂಗ್ರಹಿಸುವಲ್ಲಿ ಇವರು ಯಾವಾಗಲೂ ಕಿರಿಯರಾಗಿರುತ್ತಿದ್ದರು.

## ರಾಷ್ಟ್ರ ಪ್ರಶಸ್ತಿ

1965ರಲ್ಲಿ, ಸಂಪ್ರದಾಯಕಲೆಯನ್ನು ಜೀವಂತಗೊಳಿಸುವುದಕ್ಕಾಗಿ ಭಾರತ ಸರ್ಕಾರ ವಾದಿರಾಜರಿಗೆ ರಾಷ್ಟ್ರಪ್ರಶಸ್ತಿಯನ್ನು ನೀಡಿ ಗೌರವಿಸಿತು. ಭಾರತದ ಸ್ವಾತಂತ್ರ್ಯದ ಬೆಳ್ಳಿಹಬ್ಬದ ಸಂದರ್ಭದಲ್ಲಿ ವಾದಿರಾಜರು ಮಾಡಿದ ಕಲ್ಲಿನ ಹೊಯ್ಸಳ ಶೈಲಿಯ ವೇಣುಗೋಪಾಲ ವಿಗ್ರಹಕ್ಕೆ ವಿಶೇಷ ಪ್ರಶಸ್ತಿ ದೊರೆಯಿತು.

ರಾಷ್ಟ್ರಪ್ರಶಸ್ತಿ ವಿಜೇತ ಕಲಾವಿದರ ಮಾರ್ಗದರ್ಶನದಲ್ಲಿ, ಅಖಿಲ ಭಾರತ ಕರಕುಶಲ ಮಂಡಳಿಯು ಏರ್ಪಡಿಸುತ್ತಿದ್ದ ತರಬೇತಿ ಯೋಜನೆಯಡಿ, ಇಂದು ಖ್ಯಾತ ಕಲಾವಿದರೆನಿಸಿರುವ ಶ್ರೀ ಶ್ಯಾಮಾಚಾರ್, ಶ್ರೀಮತಿ ಕನಕಾಮೂರ್ತಿ ಮುಂತಾದವರಿಗೆ ತರಬೇತಿ ನೀಡಿದರು. ಕಾರಣಾಂತರಗಳಿಂದ ಈ ಶಿಕ್ಷಣ ಯೋಜನೆಯು ಮಧ್ಯಾವಧಿಯಲ್ಲೆ ನಿಂತುಹೋಯಿತು. ಆದರೂ ಗುರು ವಾದಿರಾಜ್ ಅವರ ಬಳಿಯಲ್ಲಿಯೇ ಶ್ರೀ ಶ್ಯಾಮಾಚಾರ್ ಮತ್ತು ಶ್ರೀಮತಿ ಕನಕಾಮೂರ್ತಿಯವರು ತಮ್ಮ ಕಲಾ ಶಿಕ್ಷಣವನ್ನು ಮುಂದುವರೆಸಿದರು. ಶ್ರೀ ವಾದಿರಾಜರವರ ಪ್ರತಿಯೊಂದು ಕೆಲಸಕಾರ್ಯಗಳಲ್ಲಿ ಶ್ರೀಮತಿ ಕನಕಾಮೂರ್ತಿ ಭಾಗಿಯಾಗಿ ಶಿಲ್ಪಕಲೆಯನ್ನೂ ಕರಗತ ಮಾಡಿಕೊಂಡರು.

ಇನ್ನು ವಾದಿರಾಜರಂತಹ ವ್ಯಕ್ತಿಯ ಕಲಾಪ್ರಭಾವ ಅವರ ಕುಟುಂಬದ ಮೇಲೆ ಬೀಳದೆ ಇರುತ್ತದೆಯೆ? ಇವರ ಏಕಮಾತ್ರ ಪುತ್ರರಾದ ಶ್ರೀ ಸುಬ್ಬಣ್ಣನವರು ಒಬ್ಬ ನಿಷ್ಣಾತ ವಾಸ್ತುಶಿಲ್ಪಿಗಳು. ಸಂಡೂರಿನ ನಟರಾಜ ದೇವಾಲಯದ ನಿರ್ಮಾಣದಲ್ಲಿ ಇವರು ಗಮನಾರ್ಹ ಪಾತ್ರ ವಹಿಸಿದ್ದಾರೆಂಬುದು ಗಮನೀಯ. ಈ ದೇವಾಲಯುದಲ್ಲಿ ಪ್ರತಿಷ್ಠಾಪಿತಗೊಂಡಿರುವ 7 ಅಡಿ ಎತ್ತರದ ಚೋಳಶೈಲಿಯ ನಟರಾಜ ಶಿಲ್ಪ ಒಂದು ಉತ್ತಮ ಕೃತಿಯೇ ಸರಿ.

ಜಪಾನಿನವರಿಗಾಗಿ ಇವರು ಮಾಡಿದ ಕೃತಿಗಳ ಸಂಖ್ಯೆ ಅಪಾರ. ಗಂಧದ ಮರದಲ್ಲಿ, ಕಲ್ಲಿನಲ್ಲಿ, ತೇಗದ ಮರದಲ್ಲಿ ನಮ್ಮ ದೇವತಾ ಮೂರ್ತಿಗಳು, ಬೇರೆ ಬೇರೆ ಶೈಲಿಯ ಬುದ್ಧನ ವಿಗ್ರಹಗಳೂ ಅನೇಕವಿವೆ. ಬೆಂಗಳೂರಿನ ಪಿಂಗಾಣಿ ಕಾರ್ಖಾನೆಗೆ ಸಲಹೆ ನೀಡಲು ಬಂದ ಕೆಲವು

ಜಪಾನಿ ತಂತ್ರಜ್ಞರು ಇವರಲ್ಲಿ ಒಂದೆರಡು ವರ್ಷಗಳ ಕಾಲ ಕೆತ್ತನೆಯ ತರಬೇತಿಯನ್ನೂ ಪಡೆದರು, ಎಂದರೆ ವಾದಿರಾಜರ ಜ್ಞಾನಕೌಶಲ್ಯದ ಅರಿವಾಗದಿರದು.

''ಪ್ರಪಂಚದ ಯಾವ ಭಾಗವೇ ಆಗಲಿ, ಕಲಾವಿದರೆಲ್ಲಾ ಯೋಚಿಸುವ, ಕೆಲಸ ಮಾಡುವ ವಿಧಾನವೆಲ್ಲ ಒಂದೇ ರೀತಿ. ಬೇರೆ ಬೇರೆ ಭಾಷೆ, ಸಂಸ್ಕೃತಿಗಳಿರಬಹುದು; ಬೇರೆ ಬೇರೆ ಮಾಧ್ಯಮಗಳನ್ನು ಬಳಸಬಹುದು; ಮತ್ತು ಕಲೆಯ ಗುರಿಯೆ ಬೇರೆ ಬೇರೆಯಾಗಿರಬಹುದು. ಆದರೆ ಮೂಲತಃ ಕಲಾವಿದನ ಮನೋಧರ್ಮ ಒಂದೇ ಆಗಿರುತ್ತದೆ''ಎಂದು ದೇಶ ವಿದೇಶದ ಕಲಾವಿದರನ್ನು ಕಂಡು ಅವರೊಡನೆ ಇದ್ದು ಪಡೆದ ಅನುಭವದಿಂದ ವಾದಿರಾಜರು ಹೇಳುತ್ತಿದ್ದರು. ''ಕೃತಿ ರಚನೆಗೆ ತೊಡಗಿದ ಮೇಲೆ ಮನಸ್ಸೆಲ್ಲಾ ಅಲ್ಲೇ ಇರುತ್ತದೆ. ಅನಿವಾರ್ಯದಿಂದ ಕೆಲಸ ಬಿಟ್ಟು ಹೊರಗೆ ಹೋದರೂ, ಮನಸ್ಸು ಮಾತ್ರ ಆ ಕೃತಿಯ ಮೇಲೇ ಇರುತ್ತದೆ'' ಎನ್ನುತ್ತಿದ್ದರು.

## ಲಂಡನ್ ಯಾತ್ರೆ

ಭಾರತ ಸರ್ಕಾರ ಮೊಟ್ಟ ಮೊದಲ ಬಾರಿಗೆ 'ಭಾರತ ಉತ್ಸವ' (ಫೆಸ್ಟಿವಲ್ ಆಫ್ ಇಂಡಿಯಾ) ದಲ್ಲಿ ಸಾಂಪ್ರದಾಯಿಕ ಕಲಾರಂಗವನ್ನು ಪ್ರತಿನಿಧಿಸಲು ವಾದಿರಾಜರನ್ನು ಬ್ರಿಟನ್ ದೇಶಗಳಿಗೆ ಕಳುಹಿಸಿತು. ಈ ಉತ್ಸವದಲ್ಲಿ ಐದು ತಿಂಗಳ ಕಾಲ ವಾದಿರಾಜರು ಭಾಗವಹಿಸಿ ರಾಷ್ಟ್ರಕ್ಕೆ ಕೀರ್ತಿತಂದರು. ಅಲ್ಲಿಂದ ಮುಂದೆ ಆರು ಬಾರಿ ಲಂಡನ್ ಯಾತ್ರೆ ಮಾಡಲು ಅಲ್ಲಿನ ಜನರೇ ವಾದಿರಾಜರ ಪ್ರಯಾಣದ ಖರ್ಚನ್ನು ಭರಿಸಿದ್ದರು ಎಂದರೆ ವಾದಿರಾಜರ ಪ್ರಭಾವ ಅಲ್ಲಿನ ಜನರ ಮೇಲೆ ಎಷ್ಟಿತ್ತು? ಎಂಬುದು ಊಹೆಗೆ ಬಿಟ್ಟದ್ದು.

ವಾದಿರಾಜರಲ್ಲಿ ಎಂದೂ ಸ್ವಾರ್ಥ ಮನೋಭಾವವಿಲ್ಲ. ತಮ್ಮ ಪ್ರತಿ ಲಂಡನ್ ಪ್ರವಾಸದಲ್ಲೂ ಯೋಗ್ಯರೆನಿಸಿದ ಹಲವಾರು ಕಲಾವಿದರನ್ನು ಅಲ್ಲಿಗೆ ಕರೆದೊಯ್ದು ಪರಿಚಯ ಮಾಡಿಸುತ್ತಿದ್ದರು. ಕನಕಾಮೂರ್ತಿ, ಶ್ರೀನಿವಾಸನ್, ಶ್ರೀಡಾಂಭಿಕೇಶ್ವರ್, ಶ್ರೀ ವಿಜಯ ಹಾಗರಗುಂಡಗಿ, ಶ್ರೀ ವೇಣುಗೋಪಾಲ್ ಮುಂತಾದವರು ವಾದಿರಾಜರೊಂದಿಗೆ ಲಂಡನ್‌ಗೆ

ಹೋಗಿಬಂದ ಕಲಾವಿದರಲ್ಲಿ ಕೆಲವರು. 1985ರಲ್ಲಿ ಲಂಡನ್ನಿಗೆ ಹೋದಾಗ, ಭಾರತೀಯ ವಿದ್ಯಾಭವನದಲ್ಲಿ ಇವರ ಪ್ರದರ್ಶನ ಮತ್ತು ಇವರಿಗೆ ಅಭಿನಂದನಾ ಕಾರ್ಯಕ್ರಮ ಏರ್ಪಾಡಾಗಿತ್ತು.

ಈ ಸಂದರ್ಭದಲ್ಲಿ ಏರ್ಪಟ್ಟಿದ್ದ ಪ್ರಶ್ನೋತ್ತರ ಕಾಲದಲ್ಲಿ 'ಸಾಂಪ್ರದಾಯಿಕ ಕಲೆ', ಆಧುನಿಕ ಯುಗದಲ್ಲಿ ಯಾವ ರೀತಿ ಉಪಯುಕ್ತವಾಗಿದೆ? ಸಂಪ್ರದಾಯ ಕಲೆಗೆ ಭವಿಷ್ಯವಿದೆಯೆ?'' ಎಂಬ ಪ್ರಶ್ನೆಗಳಿಗೆ ವಾದಿರಾಜರು ಹೇಳಿದರು-ಹಿಂದೆ ಕೇವಲ ಧಾರ್ಮಿಕ ಹಿನ್ನೆಲೆಯಲ್ಲಿ ಕಲೆಯನ್ನು ಬಳಸಿಕೊಳ್ಳುತ್ತಿದರು. ಈಗ ಅಲಂಕಾರಕ್ಕಾಗಿ, ಮನಸ್ಸಂತೋಷಕ್ಕಾಗಿ ಕಲೆಯನ್ನು ಬಳಸುವ ಹೊಸ ಪ್ರಭಾವ ನಮ್ಮ ದೇಶದಲ್ಲೂ ಪ್ರಾರಂಭವಾಗಿದೆ. ಇದು ಸಂಪ್ರದಾಯ ಕಲಾವಿದನ ದೃಷ್ಟಿಯಿಂದ ಬಹಳ ಉತ್ತಮ ಕಾಲ. ಕಲೆಯ ಪರಿಪೂರ್ಣತೆ ಮತ್ತು ಅದರ ವಿಶಾಲವ್ಯಾಪ್ತಿಗೆ ಇದಕ್ಕಿಂತ ಒಳ್ಳೆಯ ಅವಕಾಶ ದೊರೆಯಲಾರದು. ಇಂದು ಪ್ರಪಂಚದಾದ್ಯಂತ ನಮ್ಮ ಸಂಪ್ರದಾಯದ ಚೋಳರ ಕಂಚಿನ ಪ್ರತಿಮೆಗಳು, ಗುಪ್ತರ ಕಾಲದ ಶಿಲ್ಪಗಳು, ಚಾಲುಕ್ಯರ, ಹೊಯ್ಸಳರ ಮನಸೆಳೆಯುವ ಮದನಿಕಾ, ಗಂಧರ್ವ ವಿಗ್ರಹಗಳೂ, ಹೀಗೆ ಹಲವಾರು ಸುಂದರ ಶಿಲ್ಪಗಳನ್ನು ಗೃಹಾಲಂಕರಣಕ್ಕಾಗಿ, ತಮ್ಮ ಮನಸ್ಸಂತೋಷಕ್ಕಾಗಿ ಸಂಗ್ರಹಿಸಲು ಕಲಾರಸಿಕರು ಕಾತುರರಾಗಿದ್ದಾರೆ. ನಮ್ಮ ಸಂಪ್ರದಾಯ ಕಲಾವಿದರು ಈ ಅವಕಾಶವನ್ನು ಬಳಸಿಕೊಂಡು, ಸಂಪ್ರದಾಯಕ್ಕೆ ಅಪಚಾರವಾಗದಂತೆ, ಹೊಸ ಹೊಸ ಬೇಡಿಕೆಗಳಿಗಾಗಿ ಕೃತಿಗಳನ್ನು ಮಾಡಿ ಜನಪ್ರಿಯಗೊಳಿಸಬೇಕು. ಈ ದಿಕ್ಕಿನಲ್ಲಿ ಹೆಚ್ಚಿನ ಸಂಶೋಧನೆಗಳನ್ನು ಮಾಡಿ ಕ್ಷೇತ್ರವನ್ನು ವಿಸ್ತಾರಗೊಳಿಸಲು ಅವಕಾಶ, ಹಿಂದಿಗಿಂತಲೂ ಇಂದು ಅಧಿಕವಾಗಿದೆ ಎಂದು.

''ಯಾವ ಕ್ಷೇತ್ರದಲ್ಲೇ ಆಗಲಿ ಕಲಾವಿದನಿಗೆ ಅಹಂ ಎನ್ನುವುದು ಬೆಳೆಯುವುದು ಸ್ವಾಭಾವಿಕ. ಅದನ್ನು ಹೇಗೆ ನಿಗ್ರಹಿಸುತ್ತೀರಿ? ಇದಕ್ಕೆ ನಿಮ್ಮ ಕಲಾಪರಂಪರೆಯಲ್ಲಿ ಏನಾದರೂ ಮಾರ್ಗವಿದೆಯೇ?'' ಎನ್ನುವ ಪ್ರಶ್ನೆಗೆ ''ಅಹಂ ಬರುವುದು, ಎಲ್ಲ ಕ್ಷೇತ್ರಗಳಲ್ಲೂ ಇದೆ. ಇದು ಮನುಷ್ಯನಿಗೆ ಬಂದಿರುವ ಪ್ರಕೃತಿ ಸಹಜವಾದ ಗುಣ. ಕಲಾವಿದ ತನ್ನ ಸಾಧನೆಯಲ್ಲಿ ಮುಂದುವರಿದಂತೆ, ಇತರ ಕಲಾವಿದರೊಡನೆ ತನ್ನನ್ನು ಹೋಲಿಸಿಕೊಳ್ಳಬಹುದು. ನಮ್ಮ ಹಿಂದಿನವರು ಮಾಡಿಟ್ಟಿರುವ ಪ್ರಾಚೀನ

ಕೃತಿಗಳನ್ನು ಕಂಡು ಅದಕ್ಕೆ ನಮ್ಮ ಕಲೆಯನ್ನು ಹೋಲಿಸಿಕೊಂಡಾಗ, ಅಹಂಭಾವ ನಮ್ಮ ಹತ್ತಿರ ಕೂಡ ಸುಳಿಯಲಾರದು. ಅದರ ಭವ್ಯತೆಯ ಮುಂದೆ ನಾವು ತೃಣವಾಗುತ್ತೇವೆ'' ಎಂದು ನುಡಿದರು. ಹೀಗೆ ಶಿಲ್ಪಕಲೆಯ ಮೇಲಿನ ಪ್ರಶ್ನೋತ್ತರ ಗಂಟೆಗಟ್ಟಲೆ ನಡೆಯುತ್ತಿತ್ತು.

ಸಂಪ್ರದಾಯ ಶೈಲಿಗಳಲ್ಲಿ ಏಕತೆಯನ್ನು ಗುರುತಿಸುವುದೇ ಬಹಳ ಕಷ್ಟ. ಏಕೆಂದರೆ ಭಾರತದ ಉದ್ದಗಲಕ್ಕೂ ಹರಡಿರುವ ಶಿಲ್ಪಗಳಲ್ಲಿ ಕಾಣದಿರುವ ವಿಷಯಗಳೇ ಇಲ್ಲ. ಅತ್ಯಂತ ಗಹನವಾದ ಆಧ್ಯಾತ್ಮದಿಂದ ಹಿಡಿದು, ಜನಸಾಮಾನ್ಯರ ನಿತ್ಯ ಜೀವನದವರೆಗೂ ವಿಷಯಗಳನ್ನು ಆರಿಸಿಕೊಂಡು ವಿವಿಧ ಶೈಲಿಗಳಲ್ಲಿ ವಿವಿಧ ಮಾಧ್ಯಮಗಳಿಗೆ ಅನುಸಾರವಾಗಿ ಶಿಲ್ಪಸಂಪತ್ತನ್ನೇ ನಮ್ಮ ಹಿರಿಯರು ಸೃಷ್ಟಿಸಿದ್ದಾರೆ. ಇಷ್ಟೆಲ್ಲ ಸಂಗ್ರಹ ನಮ್ಮೆದುರಿಗಿರುವಾಗ ಈಗಿನವರು ಇನ್ನೂ ಏನನ್ನಾದರೂ ಕ್ರಿಯಾತ್ಮಕವಾಗಿ ಸೃಷ್ಟಿಸಬಹುದೆ? ಎಂಬ ಪ್ರಶ್ನೆ ದೊಡ್ಡದಾಗಿ ನಿಲ್ಲುತ್ತದೆ. ಅಂತಹ ಸವಾಲುಗಳನ್ನು ಗುರುತಿಸುವುದು ಕೂಡಾ ಕೇವಲ ಪಳಗಿದ ಕಣ್ಣುಗಳಿಗೆ ಮಾತ್ರ ಸಾಧ್ಯ. ಈ ಕ್ರಿಯಾಶೀಲತೆಯ ಬಗ್ಗೆ ಮಾತನಾಡುವಾಗ ವಾದಿರಾಜರು ಹೀಗೆ ಹೇಳುತ್ತಿದ್ದರು. ''ನಾವು ಇದಕ್ಕೆ ಶಾಸ್ತ್ರೀಯಸಂಗೀತದ ಉದಾಹರಣೆಯನ್ನು ಕೊಡಬಹುದು. ಶಾಸ್ತ್ರೀಯ ಸಂಗೀತದ ಗಾಯಕರು ರಾಗಗಳನ್ನೂ ಕೀರ್ತನೆಗಳನ್ನೂ ಹಿಂದಿನಿಂದಲೂ ಹಾಡುತ್ತಲೇ ಬಂದಿದ್ದಾರೆ. ಇಂದೂ ಹಾಡುತ್ತಿದ್ದಾರೆ. ರಾಗಲಕ್ಷಣಗಳನ್ನಾಗಲಿ, ಕೀರ್ತನೆಯನ್ನಾಗಲೀ ಯಾರೂ ಬದಲಾಯಿಸಲು ಸಾಧ್ಯವೇ ಇಲ್ಲ. ಅದೇ ರಾಗ, ಅದೇ ತ್ಯಾಗರಾಜರ ಅಥವಾ ಮತ್ತೊಬ್ಬರ ರಚನೆ. ಆದರೂ ಗಾಯಕರು ಅದನ್ನೂ ತಮ್ಮದಾಗಿಸಿಕೊಂಡು ಸಫಲರಾಗಿದ್ದಾರೆ. ಇಲ್ಲಿ ಒಂದು ಸಂಪ್ರದಾಯದ ಚೌಕಟ್ಟಿನಲ್ಲಿ ತಮ್ಮತನವನ್ನು ಬೆಳೆಸಿರುವುದನ್ನು ಕಾಣಬಹುದು. ಶಾಸ್ತ್ರೀಯ ಪರಂಪರೆಯ ಯಾವ ವಿದ್ಯೆಯೇ ಆಗಲಿ ಅನುಕರಣೆ ಅನಿವಾರ್ಯ. ಆದರೆ ಅದೇ ಗುರಿಯಲ್ಲ. ಅದರಲ್ಲಿ ಸ್ವಂತಿಕೆ ಮೂಡಬೇಕು.'' ಈ ದೃಷ್ಟಿಯಲ್ಲಿ ನೋಡಿದಾಗ ವಾದಿರಾಜರು ರಚಿಸಿದ ಕೆಲವು ಅನುಕರಣ ಕೃತಿಗಳಲ್ಲೂ ಮೂಲಕೃತಿಗಿಂತ ಭಿನ್ನವಾದ ಒಂದು ಆಕರ್ಷಕ ಅಂಶ ಎದ್ದು ಕಾಣುತ್ತಿತ್ತು. ಅನುಕರಣವನ್ನು ವಾದಿರಾಜರು ಕೇವಲ ಅಧ್ಯಯನವನ್ನಾಗಿಸಿಕೊಂಡಿದ್ದರು. ಈ ಅಧ್ಯಯನದ ಪ್ರಭಾವದಿಂದ ಅವರು ರಚಿಸುತ್ತಿದ್ದ ಶಿಲ್ಪಗಳಲ್ಲಿ ವಿಶೇಷವಾದ ರಮ್ಯತೆ, ಸೊಬಗು, ಹಾಗೂ ಲಾವಣ್ಯ ಮೂಡಿಬರುತ್ತಿತ್ತು.

ಅವರ ಹೊಯ್ಸಳ ಶೈಲಿಯ ಗೋಪಾಲಕೃಷ್ಣ, ಕೆಂಪುಕಲ್ಲಿನ ನಾಯಿಕಾ ಮುಂತಾದವನ್ನು ಇಲ್ಲಿ ಉದಾಹರಿಸಬಹುದು. ''ಇಂತಹ ಅಧ್ಯಯನವನ್ನು ಇನ್ನು ಕೆಲವು ವರ್ಷಗಳು ನಡೆಸಿದರೆ ನನ್ನದೇ ಎನ್ನುವ ಶೈಲಿಯನ್ನು ನಾನು ರೂಢಿಸಿಕೊಳ್ಳಬಹುದು'' ಎನ್ನುತ್ತಿದ್ದರು. ಹೀಗೆ ಸಂಪ್ರದಾಯದ ಚೌಕಟ್ಟಿನಲ್ಲಿ ತಮ್ಮತನವನ್ನು ಅಳವಡಿಸಿಕೊಳ್ಳುತ್ತಿದ್ದ, ಬೆಳೆಸಿಕೊಳ್ಳುತ್ತಿದ್ದ ಹಂತವನ್ನು ನಾವು ಅವರ ಕೃತಿಗಳಾದ 'ಶಿಲ್ಪಿ', 'ಚಾಲುಕ್ಯ ಶೈಲಿಯತಲೆಗಳು', 'ದತ್ತಾತ್ರೇಯ, 'ಹಸುವನ್ನೊರಗಿ ನಿಂತಿರುವ ಕೃಷ್ಣ' ಮುಂತಾದ ಕೃತಿಗಳಲ್ಲಿ ಕಾಣಬಹುದು.

## ವಿಶಿಷ್ಟ ಪ್ರಯೋಗಗಳು

ವಾದಿರಾಜರು ಮಾಡಿದ ಅತ್ಯುತ್ತಮ ಕೃತಿಗಳ ಒಂದು ದೊಡ್ಡ ಪಟ್ಟಿಯನ್ನೇ ಕೊಡಬಹುದು. ಕಲ್ಲು, ಗಟ್ಟಿಕಲ್ಲು, ಕೆಂಪುಕಲ್ಲು, ಮರ, ಗಂಧದಮರ, ಪ್ಲಾಸ್ಟರ್ ಆಫ್ ಪ್ಯಾರಿಸ್, ಅಮೃತಶಿಲೆ, ಹಸಿರು ಸ್ಫಟಿಕಶಿಲೆ (Greenquartz) ಫೈಬರ್ ಗ್ಲಾಸ್, ಸಿಮೆಂಟ್ ಹೀಗೆ ಹಲವಾರು ಮಾಧ್ಯಮಗಳಲ್ಲಿ, ಹಲವಾರು ಶೈಲಿಗಳಲ್ಲಿ ಕೃತಿರಚನೆಮಾಡಿ ಜನಪ್ರಿಯರಾಗಿದ್ದಾರೆ. ಸಂಪ್ರದಾಯ ಶೈಲಿಯಿಂದ ಹಿಡಿದು ನವೀನ ಶೈಲಿಯವರೆಗೂ ಕುಶಲತೆ ತೋರಿದ್ದಾರೆ.

ಕೆಲವು ಸಣ್ಣ ಸಣ್ಣ ಶಿಲ್ಪಗಳನ್ನು ಪ್ರತಿಕೃತಿ ಮಾಡುವಾಗ ವಾದಿರಾಜರು ನಡೆಸಿದ ಪ್ರಯೋಗಗಳು ವಿಶಿಷ್ಟವಾದವು. ಮೊದಮೊದಲು ಎಂದರೆ ಜೀವನಾಧಾರಕ್ಕೆ ಬಹಳ ತೊಂದರೆಯಾಗಿದ್ದ ಕಾಲದಲ್ಲಿ, ಪ್ಲಾಸ್ಟಿಕ್‌ಮೌಲ್ಡ್‌ನಿಂದಲೇ ತಯಾರಿಸಿದರು. ಅದರಲ್ಲಿ ಅಷ್ಟು ಹಣ ಸಿಕ್ಕುತ್ತಿರಲ್ಲಿಲ್ಲ. ಆಗ ಪಾಶ್ಚಾತ್ಯದೇಶಗಳಲ್ಲಿ ರಬ್ಬರ್‌ಮೌಲ್ಡ್ ಬಳಸುತ್ತಿದ್ದರು. ಅದು ಮುಂಬಯಿಯಲ್ಲಿ ದೊರೆಯುವುದೆಂದು ತಿಳಿದ ಕೂಡಲೇ ಅದರ ಬಗ್ಗೆ ಅನ್ವೇಷಣೆ ಪ್ರಾರಂಭಿಸಿದರು. ಕೊನೆಗೂ ರಬ್ಬರ್‌ಮೌಲ್ಡ್ ದೊರೆತ ಮೇಲೆ ಮನೆಯೇ ಪ್ರಯೋಗ ಶಾಲೆ ಮತ್ತು ಉತ್ಪಾದನಾ ಕೇಂದ್ರವಾಯಿತು. ಕೃಷ್ಣ, ಗಣೇಶ, ಬುದ್ಧ, ಹೀಗೆ ನಾಲ್ಕಾರು ಶಿಲ್ಪಗಳ ಪ್ರತಿಕೃತಿಯನ್ನು ಮಾಡಿದರು. ವಾದಿರಾಜರು ''ಕಲಾವಿದ ಯಾವ ಕ್ಷಣದಲ್ಲೂ ಕೆಲಸವಿಲ್ಲ ಎನ್ನದೆ, ಇಂತಹ ಪ್ರಯೋಗಗಳನ್ನು ಹೆಚ್ಚು ಹೆಚ್ಚು ಮಾಡಬೇಕು'' ಎನ್ನುತ್ತಿದ್ದರು. ತಮ್ಮಲ್ಲಿ ಬಂದವರಿಗೆಲ್ಲಾ ಶಿಲ್ಪಕಲೆಯ

ಬಗೆಗೆ ಎಲ್ಲವನ್ನು ತಿಳಿಸುತ್ತಿದ್ದರಲ್ಲದೆ, ಶಿಷ್ಯರಿಗೆ ತಾವು ಮಾಡಿದ ಕೃತಿಗಳನ್ನು ಪ್ರತಿಕೃತಿ ಮಾಡಿಕೊಳ್ಳಲು ಹೇಳುತ್ತಿದ್ದರು. ಫೈಬರ್ ಗ್ಲಾಸ್, ರೆಸಿನ್ ಬಗ್ಗೆ ಪ್ರಯೋಗ ನಡೆಸಿ, ಶಿಲ್ಪಗಳು ಹಗುರವಾಗಿ ಇರುವಂತೆ ಬಳಸಿದರು. ಅದರಿಂದ ಕಟ್ ಗ್ಲಾಸ್ ಪೇಂಟಿಗ್ಸ್ ಮಾಡುವರೀತಿ ಚಿತ್ರಗಳನ್ನು ಮಾಡಿ ಹಿಂದಿನಿಂದ ಬೆಳಕು ಬಿಟ್ಟರೆ ಚೆನ್ನಾಗಿ ಕಾಣಿಸುವಂತೆ ಮಾಡುತ್ತಿದ್ದರು. ಮಲ್ಲಿಕಾರ್ಜುನ್ ಮನ್ಸೂರರಿಗೆ ಮತ್ತು ಎ. ಸುಬ್ಬರಾಯರಿಗೆ, ತ್ಯಾಗರಾಜರ ಚಿತ್ರವನ್ನು ಈ ರೀತಿ ಕಟ್‌ಗ್ಲಾಸ್ ಪೇಂಟಿಂಗ್ ಮಾದರಿಯಲ್ಲಿ ಮಾಡಿಕೊಟ್ಟಿದ್ದಾರೆ. ನಂತರ ರಬ್ಬರ್ ಕಾಯಿಸುವ ಬದಲು, ಕೋಲ್ಡ್ ಪ್ರೋಸೆಸ್‌ನಲ್ಲಿ ದೊರೆಯುತ್ತದೆ ಎಂದು ಗೊತ್ತಾದಾಗ ಇಂಗ್ಲೆಂಡಿನಿಂದ ಅದನ್ನು ತರಿಸಿ ಪ್ರಯೋಗ ನಡೆಸಿದರು.

## ಮಾರ್ಗದರ್ಶಿ

ಕಿರಿಯರಿಗೆ ಕಲಿಸುವುದರಲ್ಲಿ, ಪ್ರೋತ್ಸಾಹ ಕೊಡುವುದರಲ್ಲಿ, ವಾದಿರಾಜರು ಅತ್ಯಂತ ಉದಾರಿಗಳು. ಯಾರು ಬಂದು ಕಲಿಯಬೇಕೆಂದರೂ ಬೇಡವೆನ್ನುತ್ತಿರಲ್ಲಿಲ್ಲ. ಕಲಿಸುವುದಕ್ಕೆ ಹಣವನ್ನು ಪಡೆಯುವುದು ಇಲ್ಲವೇ ಇಲ್ಲ. ''ಈ ಕಲೆಯೇ ಅಂತಹುದು. ಬೇಗ ಸಿದ್ಧಿ ದೊರೆಯುವುದಿಲ್ಲ, ಹಾಗಾಗಿ ಇದಕ್ಕೇ ಆಕರ್ಷಿತರಾಗಿ ಬರುವವರೇ ಬಹಳ ವಿರಳ. ಹಾಗೆ ಬಂದಾಗ ನಾನೇಕೆ ಅವರ ಉತ್ಸಾಹವನ್ನು ಭಂಗಗೊಳಿಸಲಿ? ಅಲ್ಲದೆ ಅವರಿಗೆ ಆಸಕ್ತಿ ಇರುವಷ್ಟು ಕಲಿಯಲು ಅವಕಾಶ ಇದೆಯೋ ಇಲ್ಲವೋ? ಅಷ್ಟರಿಂದಲೇ ಅವರ ಪ್ರತಿಭೆ ಹಾಳಾಗಬಾರದು. ಹೆಚ್ಚು ಮಂದಿ ಈ ಕ್ಷೇತ್ರಕ್ಕೆ ಬಂದರೆ ಅಷ್ಟು ಒಳ್ಳೆಯದಲ್ಲವೇ?'' ಎಂದು ಕಲಿಯಲು ಬಂದವರಿಗೆ ಮಣ್ಣು ಕುಟ್ಟುವುದರಿಂದ ಹಿಡಿದು ರೇಖಾಚಿತ್ರ ಬಿಡಿಸುವವರೆಗೆ ಎಲ್ಲವೂ ಮುಖ್ಯವೆಂದು ಮನದಟ್ಟು ಮಾಡಿಕೊಡುತ್ತಿದ್ದರು. ಚಿತ್ರದಲ್ಲಿ ನಮಗೆ ಬೇಕಾದ ರೂಪರೇಷೆಗಳನ್ನು ಸರಿಯಾಗಿ ಬಿಡಿಸಿದರೆ ಅರ್ಧಕೆಲಸ ಮುಗಿದಂತೆ ಎನ್ನುತ್ತಿದ್ದ ಅವರು ತಾವೇ ಪ್ರತಿಯೊಂದು ಕೃತಿ ಮಾಡುವಾಗಲೂ, ಅದು ಚಿಕ್ಕದಿರಲಿ, ದೊಡ್ಡದಿರಲಿ, ಯಾವ ಶೈಲಿಯದೇ ಆಗಿರಲಿ, ಹಳೆಯದರ ಪ್ರತಿಕೃತಿಯಾಗಿರಲಿ, ಸ್ವಂತ ರಚನೆಯಾಗಿರಲಿ, ಮೊದಲು ಅದರ ರೇಖಾ ಚಿತ್ರ ತಯಾರಿಸುತ್ತಿದ್ದರು. ಕೂತಲ್ಲಿ, ನಿಂತಲ್ಲಿ, ಹತ್ತಾರು ರೀತಿ ಚಿತ್ರಿಸಿ, ಚಿತ್ರಿಸಿ, ಕೊನೆಗೆ ಪೂರ್ಣಪ್ರಮಾಣದ ಚಿತ್ರ ತಯಾರಿಸುತ್ತಿದ್ದರು. ಅವರು

ಚಿತ್ರಿಸಿರುವ ಈ ರೀತಿಯ ಚಿತ್ರಗಳು ನೂರಾರಿವೆ. ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದರೆ, ಕಲಿಯುವವರಿಗೆ ಅತ್ಯಂತ ಉಪಯುಕ್ತ ಮಾರ್ಗದರ್ಶಿಯಾಗುವುದರಲ್ಲಿ ಸಂದೇಹವಿಲ್ಲ. ಟಿ.ವಿ. ನೋಡುತ್ತಿದ್ದರೂ ಮಾತನಾಡುತ್ತಿದ್ದರೂ, ಕೈಯಲ್ಲಿ ಕಾಗದ, ಪೆನ್ನೂ, ಹಿಡಿದು ರೇಖಾಚಿತ್ರದ ಪ್ರತಿಯೊಂದೂ ಭಾಗವನ್ನು ಬೇರೆ ಬೇರೆ ಕೋನಗಳಿಂದ ನೋಡಿ ಬರೆಯುತ್ತಾ "ಹೀಗಿದ್ದರೆ ಚೆನ್ನಲ್ಲವೆ?" ಎಂದು ತೋರಿಸುತ್ತಿದ್ದರು. ಒಮ್ಮೆ ಸರಿಯಾದ ರೇಖಾಚಿತ್ರ ಮೂಡಿದ್ದೇ ಆದರೆ ಅರ್ಧಶಿಲ್ಪವನ್ನೂ ರಚಿಸಿದಂತೆಯೇ ಎನ್ನುತ್ತಿದ್ದರು. ಊಟ, ತಿಂಡಿ, ನಿದ್ದೆ ಯಾವುದರ ಪರಿವೆಯೂ ಇರುತ್ತಿರಲಿಲ್ಲ. ಅದಕ್ಕೆ ಹೇಳುತ್ತಿದ್ದರು-"ಶಿಲ್ಪ ನಮ್ಮನ್ನು ಎಷ್ಟು ಆಕರ್ಷಿಸುತ್ತದೆ ಎಂದರೆ, ತಾಯಿ ಮಗುವನ್ನು ಬಿಟ್ಟು ಹೋದರೆ, ಯಾವಾಗ ಬಂದು ಎತ್ತಿಕೊಳ್ಳುತ್ತೇನೋ ಎಂದು ಕಾತರಿಸುವಂತೆ, ನಾವೆಲ್ಲೇ ಹೋದರೂ, ಇದ್ದರೂ, ಮಾತಾಡುತ್ತಿದ್ದರೂ ಶಿಲ್ಪದಲ್ಲಿ ಅಷ್ಟು ಅಕ್ಕರೆಯಿರಬೇಕು" ಎಂದು. ತಾವು ಶಿಲ್ಪರಚನೆಗಾಗಿ ತೆಗೆದುಕೊಳ್ಳುವ ಹಣ ತಮಗೆ ದೊರೆತ ಸ್ಕಾಲರ್‌ಶಿಪ್ ಎನ್ನುತ್ತಿದ್ದರು. "ನಮಗೆ ಕಲಿಯಿರಿ ಎಂದು ಯಾರು ಹಣ ಕೊಡುತ್ತಾರೆ? ಆದ್ದರಿಂದ ಖರ್ಚಿನ ಬಗ್ಗೆ ಗಮನ ಕೊಡದೆ ಶಿಲ್ಪವನ್ನು, ಎಷ್ಟು ಅಚ್ಚುಕಟ್ಟಾಗಿ ಮಾಡಬಹುದು? ಅದರಿಂದ ಏನು ಕಲಿಯಬಹುದು? ಎಂಬುದರ ಕಡೆಗೆ ಗಮನ ಹರಿದಾಗ ಮಾತ್ರ, ನಾವು ಮುಂದೆ ಹೋಗುತ್ತಿದ್ದೇವೆ ಎಂದರ್ಥ. ಆ ಭಾವನೆ ಇಲ್ಲದಿದ್ದರೆ ನಾವು ಕಲಿಯುವುದು ನಿಂತಂತೆ" ಎನ್ನುತ್ತಿದ್ದರು.

ಸುಮಾರು 1984ರಿಂದ ವಾದಿರಾಜರಲ್ಲಿ ಶಿಷ್ಯವೃತ್ತಿ ಆರಂಭಿಸಿದ ಅಶೋಕ್ ಗುಡಿಗಾರ್, ಜಿ.ಎಲ್.ಭಟ್, ವೆಂಕಟರಮಣ ಭಟ್ ಹಾಗೂ ಇನ್ನೂ ಅನೇಕ ವಿದ್ಯಾರ್ಥಿಗಳು ತಮ್ಮ ಕಲಾಸೃಷ್ಟಿಯಲ್ಲಿ ವಾದಿರಾಜರ ಕಲ್ಪನೆಗಳಿಗೆ ಮೂರ್ತರೂಪ ನೀಡಿದ್ದಾರೆ. ಅವರಲ್ಲದೆ ಖ್ಯಾತನಾಮರಾದ ಅನೇಕ ಮಂದಿ ಅವರು ಶಿಷ್ಯರು, ವಾದಿರಾಜರ ಶಿಷ್ಯಪರಂಪರೆಯಲ್ಲಿದ್ದಾರೆ.

ಬೆಂಗಳೂರಿನಲ್ಲಿರುವ "ಕ್ರಾಫ್ಟ್ಸ್ ಕೌನ್ಸಿಲ್ ಆಫ್ ಕರ್ನಾಟಕ" ಎಂಬ ಕುಶಲ ಕಲಾವಿದರ ಸಂಸ್ಥೆಯಲ್ಲಿ ವಾದಿರಾಜರವರದು ಯಾವಾಗಲೂ ಉತ್ಸಾಹದ ಪಾತ್ರ. ನಾಲ್ಕು ವರ್ಷಗಳ ಕಾಲ ಈ ಸಂಸ್ಥೆಯಲ್ಲಿ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಕೆನರಾ ಬ್ಯಾಂಕ್‌ನವರು ಬೆಂಗಳೂರಿನಲ್ಲಿ ನಡೆಸುತ್ತಿರುವ "ಕೌಶಲ್ಯ" ಎಂಬ ಕುಶಲ ಕರ್ಮಿಗಳ

ಯೋಜನೆಗೂ ವಾದಿರಾಜರು ಬೆನ್ನೆಲುಬಾಗಿ ದುಡಿದಿದ್ದರು. ಇಲ್ಲಿ ಬೇರೆ ಬೇರೆ ವೃತ್ತಿಯ ಕುಶಲಕಲಾವಿದರು ಒಂದೆಡೆ ಸೇರಿ, ಕಲೆತು, ತಮ್ಮ ಕೃತಿಗಳನ್ನು ರಚಿಸಲು ಬೇಕಾದ ಸ್ಥಳಾವಕಾಶ, ಉಪಯುಕ್ತ ಯಂತ್ರಗಳ ಬಳಕೆ, ಕಚ್ಚಾ ಪದಾರ್ಥಗಳನ್ನು ಕೊಳ್ಳಲು ನೆರವು, ಹಾಗೂ ಅವರು ಮಾಡುವ ಕೃತಿಗಳನ್ನು ಗ್ರಾಹಕರಿಗೆ ಮಾರುವ ಸೌಲಭ್ಯ ಎಲ್ಲವನ್ನು ಒದಗಿಸಿದ್ದಾರೆ.

ಇಲ್ಲಿ, ''ಕೌಶಲ್ಯ'' ಸಂಸ್ಥೆಯು ಜನ್ಮತಾಳಿದ ಬಗೆಗೆ ಮತ್ತು ಅದರಲ್ಲಿ ವಾದಿರಾಜರ ಪಾತ್ರದ ಬಗೆಗೆ ಒಂದೆರೆಡು ಮಾತು ಉಲ್ಲೇಖಾರ್ಹ. 1982ರಲ್ಲಿ, ಲಂಡನಿನ್ನಲ್ಲಿ ನಡೆದ 'ಭಾರತ ಉತ್ಸವ'ದ (Festival of India) ಸಮಯದಲ್ಲಿ, ಉತ್ಸವದ ವ್ಯವಸ್ಥಾಪಕರು, ಭಾರತೀಯ ಕಲಾವಿದರಿಗಾಗಿಯೇ, ಸಮೀಪದ 'ಕುಶಲಕರ್ಮಿಗಳ ಗ್ರಾಮ' (Craftsmen village) ವೆಂದು ಕರೆಯಲ್ಪಡುತ್ತಿದ್ದ ಸ್ಥಳವೊಂದಕ್ಕೆ ಭೇಟಿಯೊಂದನ್ನು ಏರ್ಪಡಿಸಿದ್ದರು. ಆ ಗ್ರಾಮದಲ್ಲಿ ಮರದ ಕೆತ್ತನೆ, ಕಲ್ಲಿನ ಕೆತ್ತನೆ ಮತ್ತು ನೇಯ್ಗೆ ಕಲಾವಿದರು ಇರುತ್ತಿದ್ದರು. ಈ ಕಲಾವಿದರ ವಿವಿಧ ಪೂರೈಕೆಗಳನ್ನು ನಿರ್ವಹಿಸಲು, ಒಂದು ಸೌಲಭ್ಯ ಕೇಂದ್ರವೂ ಈ ಗ್ರಾಮದಲ್ಲಿ ಇದ್ದಿತು. ತಮ್ಮ ಕಲಾಕೃತಿಗಳನ್ನು, ಈ ಗ್ರಾಮದಲ್ಲಿಯೇ ಇದ್ದುಕೊಂಡು ರಚಿಸುವ ಸೌಲಭ್ಯದ ಜೊತೆಗೆ, ಸರದಿಯಂತೆ ಎಲ್ಲ ಕಲಾವಿದರೂ ತಮ್ಮ ಕೃತಿಗಳನ್ನು ಪ್ರದರ್ಶಿಸುವ ವ್ಯವಸ್ಥೆಯೂ ಇದ್ದಿತು. ಇದೊಂದು 'ಕಲಾವಿದರಿಂದ ಕಲಾವಿದರಿಗೆ' ಮಾದರಿಯ ವ್ಯವಸ್ಥೆಯಾಗಿದ್ದಿತು. ಇಂತಹ ಗ್ರಾಮಗಳಿಗೆ ಭೇಟಿಯಿತ್ತು ಕಲಾಕೃತಿಯನ್ನು ವೀಕ್ಷಿಸಲು ಮತ್ತು ಕೊಳ್ಳಲು ಅನುಕೂಲವಾಗುವಂತೆ ಸಾರಿಗೆ ಮತ್ತು ರಜದ ಸೌಲಭ್ಯಗಳನ್ನು ನೀಡಲು ಸ್ಥಳೀಯ ಸರ್ಕಾರಗಳೊಂದಿಗೆ ಈ ಗ್ರಾಮ ಸಂಪರ್ಕವನ್ನು ಹೊಂದಿತ್ತು.

ಇದರಿಂದ ಪ್ರೇರಿತರಾದ ವಾದಿರಾಜರು ಕರ್ನಾಟಕದಲ್ಲಿಯೂ ಈ ಮಾದರಿಯ ಸಂಸ್ಥೆಯೊಂದನ್ನು ಏಕೆ ಹುಟ್ಟುಹಾಕಬಾರದೆಂದು, ಕೆನರಾ ಬ್ಯಾಂಕ್‌ನಲ್ಲಿ ನಿರ್ದೇಶಕರಾಗಿದ್ದ ಶ್ರೀಮತಿ ವಿಮಲಾ ರಂಗಾಚಾರ್ ಅವರಿಗೆ ತಮ್ಮ ಯೋಜನೆಯನ್ನು ವಿವರಿಸಿದರು. ಈ ಯೋಜನೆಗೆ ಸಂಪೂರ್ಣ ಸಮ್ಮತಿಸಿದ ಶ್ರೀಮತಿ ವಿಮಲಾರಂಗಾಚಾರ್ ಅವರು ಕೆನರಾ ಬ್ಯಾಂಕ್‌ನವರ ಸಹಕಾರದೊಂದಿಗೆ ಇಂದು 'ಕೌಶಲ್ಯ' ಎಂದು ಖ್ಯಾತಿಯಾಗಿರುವ ಸಂಸ್ಥೆಯನ್ನು ಹುಟ್ಟುಹಾಕಿದರು. ಪ್ರಾರಂಭದ ದಿನಗಳಲ್ಲಿ ತಮ್ಮ

ವಿದ್ಯಾರ್ಥಿಗಳನ್ನು 'ಕೌಶಲ್ಯ' ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುವಂತೆ ಏರ್ಪಾಡು ಮಾಡಿದ ವಾದಿರಾಜರು ಮುಂದಿನ ದಿನಗಳಲ್ಲಿ ಅದರ ಯಶಸ್ಸಿಗೆ ಅಹರ್ನಿಶಿ ದುಡಿದರು. 'ಕೌಶಲ್ಯ' ಸಂಸ್ಥೆಯ ಹುಟ್ಟು ಮತ್ತು ಬೆಳವಣಿಗೆಗೆ ವಾದಿರಾಜರೇ, ಬಹುಮಟ್ಟಿಗೆ ಕಾರಣರು ಎಂದರೆ ತಪ್ಪಾಗಲಾರದು.

ಸಂಪ್ರದಾಯ ಕಲೆಯ ಕಡೆಗೇ ಪೂರ್ಣವಾಗಿ ವಾದಿರಾಜರು ತಮ್ಮ ಒಲವನ್ನು ಬೆಳೆಸಿಕೊಂಡಿದ್ದರೂ ಹೊಸ ವಿಷಯಗಳನ್ನು ಹೊಂದಿದ ಕಲೆಯ ವಿಚಾರಗಳು ಬಂದಾಗ ಮುಕ್ತ ಮನಸ್ಸಿನಿಂದ ವ್ಯವಹರಿಸುತ್ತಿದ್ದರು. ಉದಾಹರಣೆಯಾಗಿ ರಾಜ್ಯ ಲಲಿತ ಕಲಾ ಅಕಾಡೆಮಿ ತನ್ನ ಬೆಳ್ಳಿಹಬ್ಬದ ನೆನಪಿಗಾಗಿ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದ ಬಳಿ ನಿರ್ಮಿಸಿದ ಬೃಹತ್ ಸಮೂಹ ಶಿಲ್ಪದ ಮುಖ್ಯ ನಿರ್ದೇಶಕರು ವಾದಿರಾಜರೇ. ಇಲ್ಲಿ ಅನೇಕ ಶಿಲ್ಪಿಗಳು ತಮ್ಮ ಕಲಾವಂತಿಕೆಯನ್ನೂ ಅತ್ಯಂತ ಮನೋಹರವಾಗಿ ಹೊರಹೊಮ್ಮಿಸಿದ್ದಾರೆ. ವಾದಿರಾಜರು, ಅಂದಿನ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾದ ಶ್ರೀ ಆರ್.ಎಂ. ಹಡಪದ್ ಅವರೊಂದಿಗೆ ಚರ್ಚಿಸಿ ಎಲ್ಲಾ ರೀತಿಯ ಶಿಲ್ಪಗಳು ಪರಸ್ಪರ ಹೊಂದಿಕೊಳ್ಳುವಂತೆ ಸಂಯೋಜಿಸಿದ್ದ ಈ ಶಿಲ್ಪ ನಿರ್ಮಾಣ, ಅಕಾಡೆಮಿಗೆ ಒಂದು ಸವಾಲೇ ಆಗಿತ್ತು. ಆ ಸವಾಲನ್ನು ವಾದಿರಾಜರು ಯಶಸ್ವಿಯಾಗಿ ಎದುರಿಸಿದರು.

ರಾಜ್ಯ ಲಲಿತ ಕಲಾ ಅಕಾಡೆಮಿಯ ಸದಸ್ಯರಾಗಿಯೂ ಸಹ ವಾದಿರಾಜರು ತಮ್ಮ ದಿಟ್ಟ ನಿಲುವುಗಳನ್ನು ಪ್ರತಿಪಾದಿಸುತ್ತಾ ಬಂದರು. ಸಂಕಷ್ಟದ ಸಂದರ್ಭಗಳಲ್ಲಿ ಅಕಾಡೆಮಿಗೆ ಬೆಂಬಲವಾಗಿ ನಿಂತರು.

1987ರಲ್ಲಿ ವಾದಿರಾಜರು ನಾಡಿನ ಶಿಲ್ಪ ಕಲಾರಂಗದ ಸಮಗ್ರ ಬೆಳವಣಿಗೆಗಾಗಿ 'ಶಿಲ್ಪಕಲಾ ಪ್ರತಿಷ್ಠಾನ' ಸ್ಥಾಪಿಸಿ. ಅದರ ಮೂಲಕ ಕಲಾಧ್ಯಯನ, ಶಿಕ್ಷಣ ಹಾಗೂ ಪ್ರಚಾರ ಕಾರ್ಯವನ್ನು ಅರ್ಥಪೂರ್ಣವಾಗಿ ರೂಪಿಸತೊಡಗಿದರು. 1987 ಹಾಗೂ 1988ರಲ್ಲಿ ವಾದಿರಾಜರ ನೇತೃತ್ವದ ಶಿಲ್ಪೋತ್ಸವಗಳು ರಾಜ್ಯದ ಕಲಾ ಇತಿಹಾಸದ ಮೈಲಿಗಲ್ಲುಗಳಾದವು. 1989ರಲ್ಲಿ ಮೈಸೂರಿನಲ್ಲಿ ನಡೆದ ಶಿಲ್ಪೋತ್ಸವವೂ ಅತ್ಯಂತ ಯಶಸ್ವಿಯಾಯಿತು.

1993ರ ಫೆಬ್ರುವರಿ 27 ಶಿಲ್ಪಿ ವಾದಿರಾಜರು ಈ ಲೋಕವನ್ನು ಬಿಟ್ಟುಹೋದ ದಿನ. ನಾಡಿನ ಶಿಲ್ಪಕಲಾರಂಗಕ್ಕೆ ಮಂಕು ಕವಿದ ದಿನವೂ

ಹೌದು. ರಾಜ್ಯ ಸರ್ಕಾರ, ತನ್ನ ಸಕಲ ಸರ್ಕಾರಿ ಮರ್ಯಾದೆಗಳೊಡನೆ ವಾದಿರಾಜರ ಪಾರ್ಥಿವ ಶರೀರದ ಅಂತ್ಯಕ್ರಿಯೆಯಲ್ಲಿ ಭಾಗವಹಿಸಿದ್ದಿತು. ನಾಡಿನ ಕಲಾವಿದರಿಗೆ ಈ ರೀತಿಯ ವಿಶೇಷ ಗೌರವ ದೊರೆಯುವುದೂ ಸಹ ಸಾಮಾನ್ಯದ ವಿಷಯವೇನಲ್ಲ. ವಾದಿರಾಜರು ತಮ್ಮ ಜೀವನದ ಕೊನೆ ದಿನಗಳಲ್ಲಿ ನಾಡಿನ ಶಿಲ್ಪಕಲಾರಂಗದ ಬಗ್ಗೆಯೇ ಮಾತುಗಳನ್ನಾಡುತ್ತಿದ್ದರು. ಈ ದಿಕ್ಕಿನಲ್ಲಿ 'ಕ್ರಾಫ್ಟ್ ಕೌನ್ಸಿಲ್ ಆಫ್ ಕರ್ನಾಟಕ' ಸಂಸ್ಥೆಯ ರಂಗಕುಶಲಕಲೆಗಳ ಪ್ರದರ್ಶನದ ಸಮಾರೋಪ ಸಂದರ್ಭದಲ್ಲಿ ವಾದಿರಾಜರು ಮಾಡಿದ ಭಾಷಣವೇ ಬಹುಶಃ ಕೊನೆಯದು ಹಾಗೂ ಬಹುಕಾಲ ನೆನಪಿನಲ್ಲಿ ಉಳಿಯುವಂತಹುದು. ಅಂದು ವಾದಿರಾಜರು ತಮ್ಮ ಭಾಷಣದಲ್ಲಿ ರಾಜ್ಯದ ಕಲಾ ನೀತಿ-ರೀತಿ ಕುರಿತು ಪಾಂಡಿತ್ಯಪೂರ್ಣ ಮಾತುಗಳನ್ನಾಡಿ ಎಲ್ಲರನ್ನು ಮಂತ್ರಮುಗ್ಧರನ್ನಾಗಿಸಿದ್ದರು.

ಇಂದು ವಾದಿರಾಜರು ದೈಹಿಕವಾಗಿ ನಮ್ಮೊಡನೆ ಇಲ್ಲ. ಆದರೆ ಅವರ ಅಪಾರ ಶಿಷ್ಯ ಪರಿವಾರ ಹಾಗೂ ಅವರು ಸೃಷ್ಟಿಸಿದ ಅಸಂಖ್ಯಾತ ಶಿಲ್ಪಗಳು ಸದಾ ನಮ್ಮೊಂದಿಗೆ ಸಂವಾದ ನಡೆಸುತ್ತಲೇ ಇರುತ್ತವೆ. ಆದ್ದರಿಂದ ವಾದಿರಾಜರು ಅಮರ.



ಬ್ರಹ್ಮ-ಚೋಳ ಶೈಲಿ BRAHMA- Chola Style



ಟೆರ್ರಾಕೋಟ ಗಣೇಶ

Terracotta Ganesh



ಗ್ರೇಟ್ ಬ್ರಿಟನ್ನಿನ 'ಮ್ಯಾಪಿನ್'
ಆರ್ಟ್‌ಗ್ಯಾಲರಿಯಲ್ಲಿ, ಕೃತಿರಚನೆಯಲ್ಲಿ
ತೊಡಗಿರುವ ಶ್ರೀ ವಾದಿರಾಜ್

Vadiraj
at Mappin Art Gallery
Great Britain



ಫೈಬರ್ ಗ್ಲಾಸಿನ ಶಾರದಾ ವಿಗ್ರಹ Sharada-Fibreglass



ಕುಮಾರಸ್ವಾಮಿ-ಚಾಲುಕ್ಯ ಶೈಲಿ Kumaraswamy in Chalukya Style



ಸುಮಾರು 30ರ ಪ್ರಾಯದ ವಾದಿರಾಜರ ಚಿತ್ರ Young Vadira



ಡಾ॥ ರಾಧಾಕೃಷ್ಣನ್
ಅವರಿಂದ ರಾಷ್ಟ್ರ ಪ್ರಶಸ್ತಿ
ಸ್ವೀಕರಿಸುತ್ತಿರುವುದು-1965

Receiving National Award
from the President of India
Dr. Radhakrishnan during 1965



ಚಾಲುಕ್ಯರ ಬಾದಾಮಿ
ಗುಹೆಗಳ ಜೋಡಿಗಳ ಶಿಲ್ಪ

Couple of Badami caves
in Chalukya style



ಮೊದಲ ಶಿಲ್ಪ ಕೃತಿ - 1945

Yashodhara-1945



ಎಲ್ಲೋರ ಶಿಲ್ಪ ಶಿಬಿರದಲ್ಲಿ
ಶಿಬಿರಾರ್ಥಿಗಳ ಶಿಲ್ಪಗಳೊಂದಿಗೆ

With the sculptures done by
students at Ellora camp



Shankaracharya at
Waterperry house-London-1986

ಲಂಡನ್ನಿನ ವಾಟರ್‌ಪೆರ್ರಿ
ಹೌಸ್‌ನಲ್ಲಿರುವ ಶಂಕರಾಚಾರ್ಯ-1986



ಭಾರತ ಸ್ವಾತಂತ್ರ್ಯದ ಬೆಳ್ಳಿಹಬ್ಬದ
ಸಂದರ್ಭದಲ್ಲಿ ವಿಶೇಷ ಬಹುಮಾನ
ಸ್ವೀಕರಿಸುತ್ತಿರುವುದು-1972

Receiving Special Award
in commemoration of Silver Jubilee
India's Independence - 1972



ರಾಷ್ಟ್ರ ಪ್ರಶಸ್ತಿ ಪಡೆದ ವಾದಿರಾಜರನ್ನು
ರಾಜ್ಯದ ಪರವಾಗಿ ಸನ್ಮಾನಿಸುತ್ತಿರುವುದು

State honours Vadiraj
after securing the Presidential Award in 1965



Chalukya Style Parvathi, ಪಾರ್ವತಿ, ಚಾಲುಕ್ಯ ಶೈಲಿ

"An artist should have to be independent, self-dignified and self-confident. He should not bring any disreputation to the art. Under no circumstances, he should bow down his head to anybody." Having firm faith in these words, Vadiraja sacrificed his whole life for the noble cause of art and artists.

Vadiraja would never compromise when any matter concerned to the art was brought before him. His constant efforts gave good results in removing the deficiency of able guidance for the development of art. Because of this reason, the life and art of Vadiraja gain importance of their own.

Vadiraja is not a stranger to the field of art. He popularized the tradition of Karnataka sculpture not only in our country but in many parts of the world in a very noticeable manner. Throughout his life, he had to face the circumstances that brought him constant challenges, but he had never lost hope on his individual capabilities. His life itself is self-evident to show what type of a man he was.

## Childhood

Devalakunda is a small village in Kundapur taluk, Dakshina Kannada district. A Vishnu temple there was

